

# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ

## ಉತ್ತಮ ನಾಗರಿಕರಾಗಲು
## ಸ್ಕೌಟ್ ಮತ್ತು ಗೈಡ್ ಚಳವಳಿಗೆ ಸೇರಿರಿ



"ಭಾರತದ ಪ್ರತಿಯೊಂದು ಮನೆಯಲ್ಲೂ
ಸ್ಕೌಟ್ ಮತ್ತು ಗೈಡ್‌ಗಳಂತಹ
ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ."

– ಮಹಾತ್ಮ ಗಾಂಧಿ

**ಸ್ಕೌಟ್ ಮತ್ತು ಗೈಡ್ ಚಳವಳಿಯು
ಮಾನವ ನಿರ್ಮಾಣದ ಒಂದು ಮಹತ್ವದ ಶಿಕ್ಷಣ**

- 3 ರಿಂದ 5 ವರ್ಷದ ಬಾಲಕ-ಬಾಲಕಿಯರು (ಬನ್ನೀಸ್)
- 5 ರಿಂದ 10 ವರ್ಷದ ಬಾಲಕ-ಬಾಲಕಿಯರು (ಕಬ್ಸ್-ಬುಲ್‌ಬುಲ್ಸ್)
- 10 ರಿಂದ 17 ವರ್ಷದ ಬಾಲಕ-ಬಾಲಕಿಯರು (ಸ್ಕೌಟ್ಸ್-ಗೈಡ್ಸ್)
- 16 ರಿಂದ 25 ವರ್ಷದ ಯುವಕ-ಯುವತಿಯರು (ರೋವರ್ಸ್-ರೇಂಜರ್ಸ್)



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು
ವಿಶ್ವ ಸ್ಕೌಟ್ ಸಂಸ್ಥೆ ಮತ್ತು ವಿಶ್ವ ಗರ್ಲ್ ಗೈಡ್ ಮತ್ತು
ಗರ್ಲ್ ಸ್ಕೌಟ್ ಸಂಸ್ಥೆಯ ಅಂಗಸಂಸ್ಥೆ

# ಕರ್ನಾಟಕ ರಾಜ್ಯ ಸಂಸ್ಥೆ ಪದಾಧಿಕಾರಿಗಳು

ಪೋಷಕರು

**ಶ್ರೀ ಥಾವರ್‌ಚಂದ್ ಗೆಹ್ಲೋಟ್**

ಕರ್ನಾಟಕದ ಗೌರವಾನ್ವಿತ ರಾಜ್ಯಪಾಲರು

ಉಪ ಪೋಷಕರು

**ರಾಜಮಾತೆ**

**ಡಾ|| ಪ್ರಮೋದದೇವಿ ಒಡೆಯರ್**

ಉಪಾಧ್ಯಕ್ಷರುಗಳು

**ಡಾ. ಎಂ.ಸಿ. ಸುಧಾಕರ್**

ಮಾನ್ಯ ಉನ್ನತ ಶಿಕ್ಷಣ ಸಚಿವರು
ಕರ್ನಾಟಕ ಸರ್ಕಾರ

**ಶ್ರೀ ಮಧು ಬಂಗಾರಪ್ಪ**

ಮಾನ್ಯ ಶಾಲಾ ಶಿಕ್ಷಣ ಮತ್ತು ಸಾಕ್ಷರತಾ
ಸಚಿವರು, ಕರ್ನಾಟಕ ಸರ್ಕಾರ

**ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ**

ಮಾಜಿ ರಾಜ್ಯ ಮುಖ್ಯ ಆಯುಕ್ತರು
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

**ಶ್ರೀಮತಿ ಭಾರತಿ ಚಂದ್ರಶೇಖರ್**

ಮಾಜಿ ಜಿಲ್ಲಾ ಗೈಡ್ಸ್ ಆಯುಕ್ತರು, ಶಿವಮೊಗ್ಗ

**ಶ್ರೀಮತಿ ಪುಷ್ಪವಲ್ಲಿ**

ಜಿಲ್ಲಾ ಗೈಡ್ಸ್ ಆಯುಕ್ತರು, ಮೈಸೂರು

**ಶ್ರೀ ಎ.ಎನ್. ಮಹೇಶ್**

ಜಿಲ್ಲಾ ಸ್ಕೌಟ್ಸ್ ಆಯುಕ್ತರು,
ಚಿಕ್ಕಮಗಳೂರು

**ಶ್ರೀಮತಿ ಆಶಾ ಪ್ರಸನ್ನಕುಮಾರ್**

ಜಿಲ್ಲಾ ಮುಖ್ಯ ಆಯುಕ್ತರು, ತುಮಕೂರು

**ಶ್ರೀ ಹೆಚ್.ಎಂ. ಸಿದ್ಧರಾಮಸ್ವಾಮಿ**

ಜಿಲ್ಲಾ ಮುಖ್ಯ ಆಯುಕ್ತರು, ಕೊಪ್ಪಳ

**ಶ್ರೀ ಗಜಾನನ ಬಿ. ಮನ್ನಿಕೇರಿ**

ನಿವೃತ್ತ ಜಂಟಿ ನಿರ್ದೇಶಕರು
ಶಾಲಾ ಶಿಕ್ಷಣ ಮತ್ತು ಸಾಕ್ಷರತಾ ಇಲಾಖೆ

ಅಧ್ಯಕ್ಷರು

**ಶ್ರೀ ಸಿದ್ಧರಾಮಯ್ಯ**

ಸನ್ಮಾನ್ಯ ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

ರಾಜ್ಯ ಮುಖ್ಯ ಆಯುಕ್ತರು

**ಶ್ರೀ ಪಿ.ಜಿ.ಆರ್. ಸಿಂಧ್ಯ**

ಮಾಜಿ ಸಚಿವರು

ರಾಜ್ಯ ಆಯುಕ್ತರು (ಸ್ಕೌಟ್ಸ್)

**ಶ್ರೀ ಎಂ.ಎ. ಖಾಲಿದ್**

ರಾಜ್ಯ ಆಯುಕ್ತರು (ಗೈಡ್ಸ್)

**ಶ್ರೀಮತಿ ಗೀತಾ ನಟರಾಜ್**

ರಾಜ್ಯ ಆಯುಕ್ತರು(ಸ್ಕೌ) (ವಯಸ್ಕ ಸಂಪನ್ಮೂಲ)

**ಶ್ರೀ ಚಿನ್ನಸ್ವಾಮಿ ರೆಡ್ಡಿ**

ರಾಜ್ಯ ಆಯುಕ್ತರು(ಗೈ) (ವಯಸ್ಕ ಸಂಪನ್ಮೂಲ)

**ಶ್ರೀಮತಿ ಬಿ.ವಿ. ರಾಮಲತಾ**

ರಾಜ್ಯ ಕಾರ್ಯದರ್ಶಿ

**ಶ್ರೀ ಕೆ. ಗಂಗಪ್ಪಗೌಡ**

ನಿವೃತ್ತ ನಿರ್ದೇಶಕರು
ಸಾರ್ವಜನಿಕ ಶಿಕ್ಷಣ ಇಲಾಖೆ

ರಾಜ್ಯ ಕೋಶಾಧಿಕಾರಿ

**ಶ್ರೀ ಟಿ. ಪ್ರಭಾಕರ್**

ಜಂಟಿ ರಾಜ್ಯ ಕಾರ್ಯದರ್ಶಿ (ಸ್ಕೌಟ್ಸ್)

**ಶ್ರೀ ಬಿ.ಕೆ. ಬಸವರಾಜ**

ನಿವೃತ್ತ ನಿರ್ದೇಶಕರು
ಸಾರ್ವಜನಿಕ ಶಿಕ್ಷಣ ಇಲಾಖೆ

ಜಂಟಿ ರಾಜ್ಯ ಕಾರ್ಯದರ್ಶಿ (ಗೈಡ್ಸ್)

**ಶ್ರೀಮತಿ ಕೃಪಾ ವಿಜಯ್**



## ರಾಜ್ಯ ಮುಖ್ಯ ಆಯುಕ್ತರ ನುಡಿ

ಸ್ಕೌಟ್ ಗೈಡ್ ಚಳವಳಿಯು ಅಂತಾರಾಷ್ಟ್ರೀಯ ಯುವ ಸಂಘಟನೆ. ನಾಲ್ಕು ಕೋಟಿಗೂ ಮೀರಿ ಸಮವಸ್ತ್ರಧಾರಿಗಳುಳ್ಳ ಈ ಚಳವಳಿ ಪ್ರಪಂಚದ 216 ರಾಷ್ಟ್ರಗಳಲ್ಲಿ ತನ್ನ ಅಸ್ತಿತ್ವವನ್ನು ಹೊಂದಿದೆ.

ಯುವಸಮುದಾಯಕ್ಕೆ ಸಾಮಾಜಿಕ ಹೊಣೆಗಾರಿಕೆ ಹಾಗೂ ಜೀವನ ಮೌಲ್ಯಗಳ ಬೆಳವಣಿಗೆಗೆ ಸಂಪೂರ್ಣ ಸಹಕಾರಿಯಾಗಿರುವ ಸ್ಕೌಟ್-ಗೈಡ್ ಚಳವಳಿಯನ್ನು ಉತ್ತಮ ರೀತಿಯಲ್ಲಿ ಮುನ್ನಡೆಸಿ ಬೆಳೆಸಬೇಕೆಂಬುದೇ ಚಳವಳಿಯಲ್ಲಿ ತೊಡಗಿಸಿಕೊಂಡಿರುವ ಲಕ್ಷಾಂತರ ಕಾರ್ಯಕರ್ತರುಗಳ ಹೆಬ್ಬಯಕೆ.

ರಾಜ್ಯದ ಎಲ್ಲಾ ಶಾಲೆ ಕಾಲೇಜುಗಳಲ್ಲಿ ತನ್ನ ಘಟಕಗಳನ್ನು ಹೊಂದುವ ಉದ್ದೇಶವು ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ಎಲ್ಲ ಹಂತದ ಕಾರ್ಯಕರ್ತರುಗಳು ಹಾಗೂ ಪದಾಧಿಕಾರಿಗಳದ್ದಾಗಿದೆ. ಈ ಕಾರ್ಯಯೋಜನೆಯನ್ನು ಅನುಷ್ಠಾನಗೊಳಿಸುವ ಹಲವಾರು ಅಂಶಗಳಲ್ಲಿ ಚಳವಳಿಯ ಎಲ್ಲಾ ವಿಭಾಗಗಳ ಪ್ರಕಟಣೆಗಳನ್ನು ಕನ್ನಡದಲ್ಲಿ ರಚಿಸುವ, ಭಾಷಾಂತರಿಸುವ ಹಾಗೂ ಪರಿಷ್ಕರಿಸುವ ಕಾರ್ಯಸೇರಿದೆ. ಯುವಸಮುದಾಯಕ್ಕೆ ಹಾಗೂ ಚಳವಳಿಯಲ್ಲಿ ತೊಡಗಿಸಿಕೊಂಡಿರುವ ಸಹಸ್ರಾರು ಕಬ್ ಮಾಸ್ಟರುಗಳು, ಸ್ಕೌಟ್ ಮಾಸ್ಟರ್‌ಗಳು, ಫ್ಲಾಕ್ ಲೀಡರುಗಳು, ಗೈಡ್ ಕ್ಯಾಪ್ಟನ್‌ಗಳು ಹಾಗೂ ರೋವರ್-ರೇಂಜರ್ ಲೀಡರುಗಳಿಗೆ ಅವರುಗಳ ಕಾರ್ಯಕ್ಷಮತೆಯ ಬೆಳವಣಿಗೆಯಲ್ಲಿ ಅನುಕೂಲವಾಗುವ, ಸ್ಕೌಟ್/ಗೈಡ್ ಚಳವಳಿಯ ವಿವಿಧ ವಿಭಾಗಗಳ ಮತ್ತು ಹಂತಗಳ ಮಾಹಿತಿ, ನೀತಿ, ನಿಯಮಾವಳಿಗಳು ಹಾಗೂ ಬೋಧನಾ ಸಾಮರ್ಥ್ಯಕ್ಕೆ ಅನುಕೂಲಕರವಾಗುವಂತಹ ಕರಪತ್ರಗಳು ಮತ್ತು ಪುಸ್ತಕಗಳನ್ನು ಕನ್ನಡದಲ್ಲಿ ಪ್ರಕಟಿಸಲು ತೀರ್ಮಾನಿಸಿ ಅದರಂತೆ ಸತತವಾಗಿ ಪ್ರಯತ್ನ ಮಾಡಲಾಗುತ್ತಿದೆ.

ಈ ದಿಸೆಯಲ್ಲಿ ಸ್ಕೌಟ್ ವಿಭಾಗದ ನಿಯಮಾವಳಿ ಪುಸ್ತಕವನ್ನು ಹೊರತಂದಿರುವುದು ಒಂದು ಮಹತ್ವಪೂರ್ಣ ಹೆಜ್ಜೆಯಾಗಿದ್ದು. ಇದೀಗ ಅದರ ಐದನೇ ಆವೃತ್ತಿಯನ್ನು ಪ್ರಕಟಿಸುತ್ತಿರುವುದು ಸಂತೋಷದ ವಿಷಯವಾಗಿದೆ.

ಸ್ಕೌಟ್ ವಿಭಾಗದ ಹಿರಿಯ ತರಬೇತುದಾರರುಗಳಾದ ಶ್ರೀ ಆರ್. ಚಂದ್ರಶೇಖರನ್ ಮತ್ತು ಶ್ರೀ ಎನ್. ಶ್ರೀನಿವಾಸನ್ ಇವರುಗಳು ಸ್ಕೌಟ್ ವಿಭಾಗದ ಗುರಿ, ಉದ್ದೇಶ, ನಿಯಮಗಳು ಹಾಗೂ ಸಂವಿಧಾನದ ವಿವರಣೆಯನ್ನು ಕನ್ನಡಕ್ಕೆ ಭಾಷಾಂತರಿಸಿ, ಇತ್ತೀಚಿನ ತಿದ್ದುಪಡಿಗಳನ್ನು ಅಳವಡಿಸಿ, ನಾಲ್ಕನೆಯ ಬಾರಿ ಪರಿಷ್ಕರಿಸಿ ಮುದ್ರಣಕ್ಕೆ ಸಿದ್ಧಪಡಿಸಿರುತ್ತಾರೆ. ಸ್ಕೌಟ್ ವಿಭಾಗದಲ್ಲಿ ಕಾರ್ಯ ನಿರ್ವಹಿಸುತ್ತಿರುವ ದಳನಾಯಕರುಗಳಿಗೆ ಉಪಯುಕ್ತವಾದ ಅಂಶಗಳನ್ನು ವಿವರಿಸಿರುತ್ತಾರೆ. ಇವರುಗಳಿಗೆ ವಿಶೇಷ ಅಭಿನಂದನೆ ಸಲ್ಲಿಸುತ್ತೇನೆ.

ಈ ಪುಸ್ತಕವನ್ನು ಪ್ರಕಟಿಸಲು ಮಾರ್ಗದರ್ಶನ ಮಾಡಿರುವ ರಾಜ್ಯ ಸಂಸ್ಥೆಯ ಪ್ರಕಟಣಾ ಸಮಿತಿಯ ಅಧ್ಯಕ್ಷರು ಹಾಗೂ ಹಿರಿಯ ಸಾಹಿತಿಗಳಾದ ಡಾ. ಗೊ.ರು. ಚನ್ನಬಸಪ್ಪ ಅವರಿಗೆ, ರಾಜ್ಯದ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪರವರಿಗೆ ಮತ್ತು ಪ್ರಕಟಣಾ ಸಮಿತಿಯ ಸದಸ್ಯರುಗಳಿಗೆ, ರಾಜ್ಯ ಕಾರ್ಯಕಾರಿ ಸಮಿತಿಗೆ, ಮುದ್ರಿಸಿಕೊಟ್ಟಿರುವ ಸತ್ಯಶ್ರೀ ಪ್ರಿಂಟರ್ಸ್ (ಪ್ರೈ.)ಲಿ., ಇವರಿಗೆ ರಾಜ್ಯ ಸಂಸ್ಥೆಯ ಪರವಾಗಿ ಹೃತ್ಪೂರ್ವಕವಾಗಿ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ಪಿ.ಜಿ.ಆರ್. ಸಿಂಧ್ಯ
ರಾಜ್ಯ ಮುಖ್ಯ ಆಯುಕ್ತರು

# ಸ್ಕೌಟ್ ಮತ್ತು ಗೈಡ್ ಚಳವಳಿ - ಒಂದು ಸ್ಥೂಲ ನೋಟ




ಲಾರ್ಡ್ ಬೇಡನ್ ಪೊವೆಲ್

ಸ್ಕೌಟ್ ಚಳವಳಿಯನ್ನು ಮೊಟ್ಟ ಮೊದಲು ಇಂಗ್ಲೆಂಡಿನಲ್ಲಿ 1907ರ ಆಗಸ್ಟ್‌ನಲ್ಲಿ ಅಧಿಕೃತವಾಗಿ ಪ್ರಾರಂಭಿಸಲಾಯಿತು. ಇಂಗ್ಲೆಂಡಿನ ಬ್ರೌನ್‌ಸೀ ದ್ವೀಪದಲ್ಲಿ ರಾಬರ್ಟ್ ಬೇಡನ್ ಪೊವೆಲ್ ಅವರು ಪ್ರಾಯೋಗಿಕ ಶಿಬಿರವನ್ನು ನಡೆಸಿದರು. ಬೇಡನ್ ಪೊವೆಲ್ ಅವರು ಸ್ಕೌಟ್ ಚಳವಳಿಯ ಜನಕರು. ಕಿರಿ ವಯಸ್ಸಿನ ಸಮುದಾಯದ ಶಕ್ತಿ ಸಾಮರ್ಥ್ಯಗಳಿಗೆ ಶಿಸ್ತು, ಸಂಘಟನೆ ಮತ್ತು ಸೇವೆಯ ಸ್ವರೂಪ ಕೊಡುವುದೇ ಬೇಡನ್ ಪೊವೆಲ್ ಅವರ ಆಶಯವಾಗಿತ್ತು.


ಓಲೇವ್ ಲೇಡಿ ಬೇಡನ್ ಪೊವೆಲ್

ಮಕ್ಕಳಲ್ಲಿ ನಿಸರ್ಗದ ಒಲವು ಮೂಡಿಸಿ ಅವರು ಸದಾ ಗೆಲುವಿನಿಂದ ಇರುವಂತೆ ಮಾಡುವ ಒಂದು ವಿಶಿಷ್ಟ ಶಿಕ್ಷಣವೇ ಸ್ಕೌಟ್-ಗೈಡ್ ಕಾರ್ಯಕ್ರಮ. ಕಟ್ಟಡದಲ್ಲಿ ನಡೆಯುವ ಪಾಠ-ಪ್ರವಚನಗಳ ಜೊತೆಗೆ ನಿಸರ್ಗದ ಪರಿಸರದಲ್ಲಿ ಆಡಿ ನಲಿಯುವ, ನೋಡಿ ಕಲಿಯುವ ಅವಕಾಶವಿರುವಂತೆ ಮತ್ತು ಹರಿಯುವ ನದಿಗಳು, ಅಚಲವಾದ ಪರ್ವತ ಶ್ರೇಣಿಗಳು, ಹಾರಾಡುವ ಪಕ್ಷಿಗಳು, ಓಡಾಡುವ ಪ್ರಾಣಿಗಳು, ಸುಳಿಯುವ ಗಾಳಿ - ಹೀಗೆ ಪ್ರಕೃತಿಯ ಒಂದೊಂದು ಅಂಶವೂ ಮಕ್ಕಳಿಗೆ ಮಾದರಿಯಾಗುವಂತೆ ಬೇಡನ್ ಪೊವೆಲ್ ಅವರು ಸ್ಕೌಟ್ ಚಟುವಟಿಕೆಗಳನ್ನು ರೂಪಿಸಿದರು.

ಅವರ ವಿಚಾರಧಾರೆ 'ಸ್ಕೌಟಿಂಗ್ ಫಾರ್ ಬಾಯ್ಸ್' ಪುಸ್ತಕದಲ್ಲಿ ವಿವರಿಸಿದ್ದು ಕನ್ನಡದಲ್ಲಿ "ಬಾಲಕರಿಗಾಗಿ ಸ್ಕೌಟಿಂಗ್" ಪುಸ್ತಕದಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿದೆ. ಅವರು ರೂಪಿಸಿದ ಕಾರ್ಯಕ್ರಮಗಳು ಜಾಗತಿಕ ಅನ್ವಯದ ಸೂತ್ರವಾದ ಕಾರಣ ಯುವಜನಾಂಗಕ್ಕೆ ಬಹಳ ಬೇಗ ಹಿಡಿಸಿತು. ಕಿರಿಯ ವಯಸ್ಸಿನವರ ಉತ್ಸಾಹ ಮತ್ತು ಸಾಹಸಾಪೇಕ್ಷೆಗಳನ್ನು ಪೂರೈಸುವ ಮತ್ತು ಸುಲಭವಾಗಿ ಹೊಂದಿಕೊಳ್ಳಬಹುದಾದಂತಹ ಸ್ಕೌಟ್ ಚಳವಳಿಯ ಚಟುವಟಿಕೆಗಳು ಕಿರಿಯರಿಗಷ್ಟೇ ಅಲ್ಲ, ಅವರಿರುವ ಇಡೀ ಸಮಾಜಕ್ಕೆ ಹಿಡಿಸಿದವು. ಸಭ್ಯ ಸಮಾಜ ನಿರ್ಮಾಣಕ್ಕೆ ಸ್ಕೌಟ್, ಗೈಡ್ ಚಳವಳಿ ಒಂದು ಪರಿಣಾಮಕಾರಿ ಮಾರ್ಗವೆಂದು ಎಲ್ಲರಿಗೂ ಮನವರಿಕೆಯಾಗಿದೆ.

ಈಗ ವಿಶ್ವದ 216 ರಾಷ್ಟ್ರಗಳು ಮತ್ತು ಪ್ರಾಂತ್ಯಗಳಲ್ಲಿ 54 ದಶಲಕ್ಷಕ್ಕೂ ಹೆಚ್ಚು ಜನ ಸ್ಕೌಟ್/ಗೈಡ್ ಚಳವಳಿಯ ವಾಹಿನಿಗೆ ಸೇರಿದ್ದಾರೆ. ಸ್ತ್ರೀ-ಪುರುಷ ಭೇದವಿಲ್ಲದೆ ಯುವಜನತೆ ಈ ಚಳವಳಿಯಲ್ಲಿ ಸೇರಿ ಸೇವೆ ಸಲ್ಲಿಸುತ್ತಿದ್ದಾರೆ. ವಿಶ್ವದ 151 ದೇಶಗಳಲ್ಲಿ ಅಂತರ್‌ರಾಷ್ಟ್ರೀಯ ಮನ್ನಣೆ ಪಡೆದ ರಾಷ್ಟ್ರೀಯ ಸ್ಕೌಟ್ ಸಂಸ್ಥೆಗಳಿವೆ.

**ವಿಶ್ವ ಸ್ಕೌಟ್ ಸಂಸ್ಥೆಯಲ್ಲಿ ಆರು ವಲಯಗಳಿವೆ:**




1. ಆಫ್ರಿಕಾ 2. ಅರಬ್ 3. ಏಷಿಯಾ ಪೆಸಿಫಿಕ್ 4. ಯುರೇಷಿಯಾ 5. ಯೂರೋಪಿಯನ್ ಮತ್ತು 6. ಅಂತರ ಅಮೆರಿಕಾ

**ವಿಶ್ವ ಗರ್ಲ್ ಗೈಡ್ ಮತ್ತು ಗರ್ಲ್ ಸ್ಕೌಟ್ ಸಂಸ್ಥೆಯಲ್ಲಿ ಐದು ವಲಯಗಳಿವೆ:**




1. ಆಫ್ರಿಕಾ 2. ಅರಬ್ 3. ಏಷಿಯಾ ಪೆಸಿಫಿಕ್ 4. ಯೂರೋಪಿಯನ್ 5. ಪಶ್ಚಿಮಾರ್ಧಗೋಳ

**ಪೋಷಕರು : ಘನತೆವೆತ್ತ ಭಾರತದ ಉಪರಾಷ್ಟ್ರಪತಿಗಳು**


ಡಾ. ಅನಿಬೆಸೆಂಟ್

ಸ್ಕೌಟ್ ಚಟುವಟಿಕೆ ಭಾರತದಲ್ಲಿ ಮೊದಲ ಬಾರಿಗೆ ಪ್ರಾರಂಭಿಸಿದ್ದು 1909ರಲ್ಲಿ ಕರ್ನಾಟಕದ ಬೆಂಗಳೂರಿನ ಬಿಷಪ್ ಕಾಟನ್ ಶಾಲೆಯ ಆವರಣದಲ್ಲಿ ಒಂದು ಮುಕ್ತ ಸ್ಕೌಟ್ ದಳದ ರೂಪದಲ್ಲಿ. ಅದನ್ನು ಆರಂಭಿಸಿದವರು ಓರ್ವ ನಿವೃತ್ತ ನೌಕಾಧಿಕಾರಿ ಕ್ಯಾಪ್ಟನ್ ಟಿ.ಹೆಚ್. ಬೇಕರ್ ಅವರು, ಅದೇ ಸಂದರ್ಭದಲ್ಲಿ ಲೆಫ್ಟಿನೆಂಟ್ ಕರ್ನಲ್ ಪಾಕೆನ್ಹಮ್ ವಾಲ್ಷ್ ಎಂಬುವರಿಂದ ಜಬಲ್‌ಪುರದಲ್ಲೂ, ಕ್ಯಾಪ್ಟನ್ ಟಾಡ್ ಅವರಿಂದ ಪುಣೆಯ ಬಳಿ ಕಿರ್ಕಿಯಲ್ಲೂ ಅಂತಹ ಸ್ಕೌಟ್ ದಳಗಳು ಆರಂಭವಾದವು. ಆದರೆ ಈ ದಳಗಳಲ್ಲಿ ಯುರೋಪಿಯನ್ ಮತ್ತು ಆಂಗ್ಲೋ-ಇಂಡಿಯನ್ ಹುಡುಗರಿಗೆ ಮಾತ್ರ ಪ್ರವೇಶಾವಕಾಶವಿತ್ತು.

ವಾಸ್ತವವಾಗಿ ಭಾರತದಲ್ಲಿ ಸ್ಕೌಟ್ ಚಳವಳಿ ಅಧಿಕೃತವಾಗಿ ಆರಂಭಗೊಂಡದ್ದು 1917ರ ಮಾರ್ಚ್ 21ರಂದು. ನಂತರ ಕ್ರಮೇಣ ದೇಶದ ನಾನಾ ಭಾಗಗಳಲ್ಲಿ ಸ್ಕೌಟ್ ದಳಗಳನ್ನೂ ತಂಡಗಳನ್ನೂ ಪ್ರಾರಂಭಿಸಲಾಯಿತು. ಬಾಲಕರಿಗೆ ಸ್ಕೌಟ್ ಸಂಘಟನೆ ಇದ್ದಂತೆ ಬಾಲಕಿಯರಿಗಾಗಿ ಗೈಡ್ ಸಂಘಟನೆಯೂ ಆರಂಭವಾಯಿತು. ಭಾರತಕ್ಕೆ ಸ್ವಾತಂತ್ರ್ಯ ಬರುವ ಮುನ್ನ ನ್ಯಾಷನಲ್ ಸ್ಕೌಟ್ಸ್ ಅಸೋಸಿಯೇಷನ್ ಆಫ್ ಇಂಡಿಯಾ, ಇಂಡಿಯನ್ ಬಾಯ್ ಸ್ಕೌಟ್ಸ್ ಅಸೋಸಿಯೇಷನ್, ಹಿಂದೂಸ್ತಾನ್ ಸ್ಕೌಟ್ಸ್ ಅಸೋಸಿಯೇಷನ್, ಗರ್ಲ್ ಗೈಡ್ ಅಸೋಸಿಯೇಷನ್ – ಹೀಗೆ ಅನೇಕ ಸಂಘಟನೆಗಳಿದ್ದವು. 1947ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಈ ಎಲ್ಲ ಸಂಘಟನೆಗಳೂ ಒಂದುಗೂಡಿ ಒಂದೇ ಸಂಘಟನೆಯಾಗಬೇಕೆಂದು ನಿರ್ಧರಿಸಿದವು. ಆ ನಿರ್ಧಾರದ ಫಲವೇ 1950ರ ನವೆಂಬರ್ 27ರಂದು ರೂಪುಗೊಂಡ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮಹಾಸಂಸ್ಥೆ. ರಾಜ್ಯದ ಮುಖ್ಯ ಆಯುಕ್ತರಾಗಿದ್ದ ಪ್ರೊ. ಪಿ. ಶಿವಶಂಕರ್ ಅವರು ಈ ವಿಲೀನತಾ (Amalgamation) ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿರುತ್ತಾರೆ.

ಹೀಗೆ ಒಟ್ಟುಗೂಡಬೇಕೆಂಬ ರಾಷ್ಟ್ರೀಯ ಸ್ಕೌಟ್ ಮತ್ತು ಗೈಡ್ ಚಳವಳಿಯ ಕನಸು ಸ್ವತಂತ್ರ ಭಾರತದಲ್ಲಿ ನನಸಾಗಿದ್ದು 1951ರ ಆಗಸ್ಟ್ 15ರಂದು. ಅಲ್ಲಿಂದೀಚೆಗೆ 'ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್' ಹೆಸರಿನಲ್ಲಿ ದೇಶದ ಎಲ್ಲ ಕಡೆ ಚಳವಳಿ ವಿಸ್ತಾರಗೊಳ್ಳುತ್ತ ಬಂದಿರುತ್ತದೆ..

ಈಗ ರಾಷ್ಟ್ರದಲ್ಲಿ ಕಂದಾಯ ರಾಜ್ಯಗಳು, ಭಾರತೀಯ ರೈಲ್ವೆ ವಲಯಗಳು ಮತ್ತು ಕೇಂದ್ರೀಯ ಹಾಗೂ ನವೋದಯ ವಿದ್ಯಾಲಯ ಸಂಘಟನೆಗಳೂ ಸೇರಿದಂತೆ ರಾಷ್ಟ್ರೀಯ ಸಂಸ್ಥೆಯ ಅಧೀನದಲ್ಲಿ ಒಟ್ಟು 54 ರಾಜ್ಯ ಸಂಸ್ಥೆಗಳಿವೆ. ಭಾರತದಲ್ಲಿ ಈಗ 62 ಲಕ್ಷಕ್ಕೂ ಹೆಚ್ಚು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿದ್ದಾರೆ.

## ಕರ್ನಾಟಕದಲ್ಲಿ

**ಪೋಷಕರು** : ಗೌರವಾನ್ವಿತ ರಾಜ್ಯಪಾಲರು, ಕರ್ನಾಟಕ

**ಉಪಪೋಷಕರು** : ಮೈಸೂರು ರಾಜಮನೆತನದ ರಾಜಮಾತೆಯವರು, ಮೈಸೂರು

**ಅಧ್ಯಕ್ಷರು** : ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ



ಶ್ರೀ ಕಂಠೀರವ ನರಸಿಂಹರಾಜ ಒಡೆಯರ್

ಚಳವಳಿ ಕರ್ನಾಟಕದಲ್ಲಿ ಅಂಕುರವಾದದ್ದು 1917ರಲ್ಲಿ. ಹಿಂದಿನ ಮೈಸೂರು ಮಹಾರಾಜರ ಕಾಲದಲ್ಲಿ. 'ದಿ ಬಾಯ್ಸ್ ಸ್ಕೌಟ್ಸ್ ಆಫ್ ಮೈಸೂರ್' ಎಂಬ ಹೆಸರಿನಲ್ಲಿ ರಾಜಾಶ್ರಯದಲ್ಲಿ ಆರಂಭಗೊಂಡ ಈ ಸಂಸ್ಥೆಗೆ ಅಂದಿನ ಮಹಾರಾಜರಾಗಿದ್ದ ಶ್ರೀ ಕೃಷ್ಣರಾಜ ಒಡೆಯರ್ ಅವರೇ ಪೋಷಕರಾಗಿದ್ದರು. ಅವರ ಸಹೋದರ ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಅವರು ಸಂಸ್ಥೆಯ ರಾಜ್ಯ ಮುಖ್ಯಸ್ಥರಾಗಿದ್ದರು. ಮಹಾರಾಜರು 1917ರ ಅಕ್ಟೋಬರ್ 3ರಂದು ಒಂದು ರಾಜಾಜ್ಞೆ ಹೊರಡಿಸಿ ರಾಜ್ಯದ ಎಲ್ಲ ಜಿಲ್ಲೆಗಳ ಶಾಲೆಗಳಲ್ಲಿ ಸ್ಕೌಟ್ ಚಟುವಟಿಕೆಗಳನ್ನು ಆರಂಭಿಸಬೇಕೆಂದು ಸೂಚಿಸಿದರು.

ಅದಾದ ಹತ್ತು ವರ್ಷಗಳ ನಂತರ ಅಂದರೆ 1927ರಲ್ಲಿ 'ದಿ ಗರ್ಲ್ ಗೈಡ್ಸ್ ಆಫ್ ಮೈಸೂರ್' ಎಂಬ ಸಂಸ್ಥೆಯು ಸ್ಕೌಟ್ ಸಂಸ್ಥೆಯ ಸೋದರ ಸಂಸ್ಥೆಯಾಗಿ ರೂಪುಗೊಂಡಿತು. ಅದಕ್ಕೆ ಯುವರಾಣಿಯವರೇ ಮುಖ್ಯಗೈಡ್ಆಗಿ ಕಾರ್ಯನಿರ್ವಹಿಸಿದರು. ಯುವರಾಜರಾದ ಶ್ರೀ ಜಯಚಾಮರಾಜ ಒಡೆಯರ್‌ರವರು ಮುಖ್ಯ ಕಬ್ ಆಗಿದ್ದರು. ಆನಂತರ ಈ ಎರಡು ಸಂಘಟನೆಗಳೂ ರಾಜಾಶ್ರಯ, ಸಾರ್ವಜನಿಕರು, ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಯುವಸಬಲೀಕರಣ ಹಾಗೂ ಕ್ರೀಡಾ ಇಲಾಖೆಗಳ ಬೆಂಬಲದಿಂದ ವಿಸ್ತಾರಗೊಂಡವು. 1951ರ ವರೆಗೆ ಪ್ರತ್ಯೇಕವಾಗಿಯೇ ಬೆಳೆದ ಈ ಎರಡು ಸಂಘಟನೆಗಳು ನಂತರ ಒಂದುಗೂಡಿ 'ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್' ಎಂಬ ಒಂದೇ ಹೆಸರಿನಲ್ಲಿ ಕಾರ್ಯನಿರ್ವಹಿಸುತ್ತ ಬಂದಿವೆ.



ಶ್ರೀ ಜಯಚಾಮರಾಜ ಒಡೆಯರ್
ಕಬ್ ವಿದ್ಯಾರ್ಥಿಯಾಗಿದ್ದರು



ಕಳೆದ ನೂರು ವರ್ಷಗಳಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕರ್ನಾಟಕ ಶಾಖೆ ಅಭಿಮಾನಪಟ್ಟುಕೊಳ್ಳುವಂತಹ ದೃಢವಾದ ಬೆಳವಣಿಗೆಯನ್ನು ಹೊಂದಿದೆ. ಸಂಖ್ಯಾ ದೃಷ್ಟಿಯಿಂದ ಮಾತ್ರವಲ್ಲ, ಸತ್ವದ ದೃಷ್ಟಿಯಿಂದಲೂ ಸ್ಕೌಟ್ ಗೈಡ್ ಚಳವಳಿಗೆ ಕರ್ನಾಟಕ ಮೌಲಿಕ ಕೊಡುಗೆ ನೀಡಿದೆ. ಸ್ಕೌಟ್/ಗೈಡ್ ಸಿದ್ಧಾಂತದ ವಿಶ್ವಾಸ ಮತ್ತು ಭರವಸೆಗಳನ್ನಿಟ್ಟುಕೊಂಡು ಪ್ರಗತಿಯ ಮೆಟ್ಟಿಲು ಏರುತ್ತಿದೆ. ಕರ್ನಾಟಕದಲ್ಲಿ ಪ್ರಸಕ್ತ ಸಾಲಿನಲ್ಲಿ 6.5 ಲಕ್ಷ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್/ ರೋವರ್ಸ್-ರೇಂಜರ್ಸ್‌ಗಳು ಹಾಗು ದಳಗಳ ನಾಯಕ/ ನಾಯಕಿಯರುಗಳು ಇದ್ದಾರೆ.

ಕರ್ನಾಟಕದಲ್ಲಿ ಆರಂಭದಿಂದ ಈ ಚಳವಳಿಯ ಮುಖ್ಯ ಆಯುಕ್ತರುಗಳಾಗಿದ್ದ ಪ್ರತಿಯೊಬ್ಬರೂ ತಮ್ಮದೇ ಆದ ಗಮನಾರ್ಹ ಸೇವೆ ಸಲ್ಲಿಸಿದ್ದಾರೆ. 1964ರಿಂದ 1982ರವರೆಗೆ ರಾಜ್ಯ ಮುಖ್ಯ ಆಯುಕ್ತರಾಗಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರ ಅವಧಿಯಲ್ಲಂತೂ ಈ ಚಳವಳಿಗೆ ಬೃಹತ್ ಪ್ರಮಾಣದ ಚಾಲನೆ ಮತ್ತು ಚೇತನಗಳು ದೊರಕಿದವು. ಅವರ ಕಾಲದಲ್ಲಿ ದೊಡ್ಡಬಳ್ಳಾಪುರದ ಬಳಿ ಇರುವ ಬೆಸೆಂಟ್ ಪಾರ್ಕ್‌ನಲ್ಲಿ ಗಮನಾರ್ಹ ಅಭಿವೃದ್ಧಿ ಕಾರ್ಯಗಳು ನಡೆದದ್ದೇ ಅಲ್ಲದೆ, ದಾವಣಗೆರೆ ಬಳಿ ಇರುವ ಕೊಂಡಜ್ಜಿ ತರಬೇತಿ ಕೇಂದ್ರದ ಸ್ಥಾಪನೆಯೂ ಆಯಿತು. ಕರ್ನಾಟಕದ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಇತಿಹಾಸದಲ್ಲಿ ಈ ಸಾಧನೆಗಳು ಒಂದು ಸ್ಮರಣೀಯ ದಾಖಲೆಗಳಾಗಿ ಉಳಿದಿವೆ. ಭಾರತದಲ್ಲಿ ಇರುವ ಸ್ಕೌಟ್ಸ್ ಮತ್ತು ಗೈಡ್ಸ್ ಶಿಬಿರ ಕೇಂದ್ರಗಳಲ್ಲಿ ಕರ್ನಾಟಕದ ಡಾ. ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ, ದೊಡ್ಡಬಳ್ಳಾಪುರ ಮತ್ತು ದಾವಣಗೆರೆ ಬಳಿಯ ಕೊಂಡಜ್ಜಿ ತರಬೇತಿ ಕೇಂದ್ರಗಳು ಅತ್ಯಂತ ಸುಸಜ್ಜಿತ ಕೇಂದ್ರಗಳೆಂದು ಹೆಸರು ಪಡೆದಿವೆ.

ಕರ್ನಾಟಕದಲ್ಲಿ ಈ ಚಳವಳಿಗೆ ಅರ್ಪಣಾ ಭಾವದಿಂದ ಸೇವೆ ಸಲ್ಲಿಸಿದ ನೇತಾರರುಗಳಾದ ಮಿ. ಫ್ರಾಂಕ್ ಸಿ. ಇರ್ವಿನ್, ಕೆನಡಾ (1918–19) ಮತ್ತು ಶ್ರೀ ಸಂಜೀವ ಕಾಮತ್ (1920–22) ನಿರ್ದೇಶಕರುಗಳಾಗಿ, ನ್ಯಾಯಮೂರ್ತಿ ಕೆ. ಶಂಕರನಾರಾಯಣರಾವ್ (1922–43), ಮೇಜರ್ ವೈ.ಎ.ಕೆ. ಮೂರ್ತಿ (1943–49), ಪ್ರೊ. ಪಿ. ಶಿವಶಂಕರ್ (1949–53), ಶ್ರೀ ಜೆ.ಬಿ. ಮಲ್ಲಾರಾಧ್ಯ (1953–60), ಪ್ರೊ. ಪಿ. ಶಿವಶಂಕರ್ (1960–64) ಶ್ರೀ ಕೊಂಡಜ್ಜಿ ಬಸಪ್ಪ (1964–82), ಶ್ರೀ ವಿ.ಪಿ. ದೀನದಯಾಳು ನಾಯ್ಡು (1982–1993) ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ (1993–2014) ಇವರುಗಳು ರಾಜ್ಯ ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸಿರುತ್ತಾರೆ. 2014ರಿಂದ ರಾಜ್ಯದ ಮಾಜಿ ಸಚಿವರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ರಾಜ್ಯ ಮುಖ್ಯ ಆಯುಕ್ತರಾಗಿ ಕ್ರಿಯಾತ್ಮಕವಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.



## ಸ್ಕೌಟ್ / ಗೈಡ್ ಎಂದರೆ...



### ಜೀವನ ಶಿಕ್ಷಣ

ಶಾಲೆ ಮತ್ತು ಮನೆ ಇವೆರಡೂ ಪೂರೈಸದ ಅಗತ್ಯಗಳನ್ನು ಸ್ಕೌಟ್ ಗೈಡ್ ಶಿಕ್ಷಣವು ಯುವಜನಾಂಗಕ್ಕೆ ಪೂರೈಸುವಲ್ಲಿ ಪರಿಣಾಮಕಾರಿಯಾಗಿದೆ. ಸ್ಕೌಟ್ ಗೈಡ್ ಸ್ವಂತ ಅರಿವನ್ನು ಪರಿಶೋಧಿಸುವ, ಪ್ರಕಾಶಿಸುವ ಮತ್ತು ಅರಿತುಕೊಳ್ಳುವ ಅಗತ್ಯವನ್ನು ವಿಕಾಸಗೊಳಿಸುತ್ತದೆ. ಸ್ಕೌಟ್ / ಗೈಡ್‌ಗಳು ತರಗತಿಯ ಕೋಣೆಗಳನ್ನು ದಾಟಿ ಹೊಸದನ್ನು ಹುಡುಕುತ್ತಾರೆ. ಕಲಿಯಲು ಇರುವ ಪ್ರತಿಭೆಗಳು ಪ್ರಕಟವಾಗುವಂತೆ ಮಾಡಿ, ಇತರರಿಗೆ ಜ್ಞಾನವನ್ನು ಮುಟ್ಟಿಸುತ್ತಾರೆ.

### ಒಂದು ಯುವಜನ ಚಳವಳಿ

ಸ್ಕೌಟ್/ಗೈಡ್ ಇದು ಒಂದು ಚಳವಳಿ..... ನಿರಂತರ ಚಳವಳಿ. ಸ್ಥಳೀಯ ಪರಿಸ್ಥಿತಿಗಳಿಗೆ ಅನುಗುಣವಾಗಿ ಎಲ್ಲ ಕಡೆಗಳಲ್ಲೂ ಸೇವೆ ಸಲ್ಲಿಸುತ್ತಲಿದೆ.

**ಅಂತರ್‌ರಾಷ್ಟ್ರೀಯ**



ವಿಶ್ವದಲ್ಲಿ 216ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ಮನ್ನಣೆ ಪಡೆದ ಸ್ಕೌಟ್ /ಗೈಡ್ ಸಂಸ್ಥೆಗಳು ಮತ್ತು ಅವುಗಳ ಶಾಖೆಗಳಿವೆ.

**ಬೆಳೆಯುತ್ತಿದೆ**



1907ರಲ್ಲಿ ಆರಂಭವಾದಂದಿನಿಂದ ಸ್ಕೌಟಿಂಗ್/ ಗೈಡಿಂಗ್ ಚಳವಳಿಯು ನಿರಂತರವಾಗಿ ಬೆಳೆಯುತ್ತಿದೆ. ಭಾರತದಲ್ಲಿ ಇಂದು 62 ಲಕ್ಷಕ್ಕೂ ಹೆಚ್ಚು ಬಾಲಕ–ಬಾಲಕಿಯರು ಚಳವಳಿಯ ಸದಸ್ಯರಾಗಿದ್ದಾರೆ. ಕಳೆದ 20 ವರ್ಷಗಳಲ್ಲಿ ಸ್ಕೌಟ್ ಗೈಡ್‌ಗಳ ಸದಸ್ಯತ್ವ ದ್ವಿಗುಣಗೊಂಡಿದೆ. ಏಷಿಯಾ ಪೆಸಿಫಿಕ್ ವಲಯದಲ್ಲಿ ಭಾರತ ಮುಂಚೂಣಿಯಲ್ಲಿದೆ.

**ಎಲ್ಲರಿಗೂ ಮುಕ್ತ**

ಸ್ಕೌಟ್ ಚಳವಳಿಯ ಸ್ಥಾಪಕ ಲಾರ್ಡ್ ರಾಬರ್ಟ್ ಬೇಡನ್ ಪೊವೆಲ್‌ರು ರೂಪಿಸಿದ ಉದ್ದೇಶ, ತತ್ವಗಳು ಮತ್ತು ಮಾರ್ಗಗಳಿಗೆ ಅನುಗುಣವಾಗಿ ಚಳವಳಿಯು ಎಲ್ಲರಿಗೂ ಮುಕ್ತವಾಗಿದೆ.

**ಉದ್ದೇಶಪೂರ್ಣ ವಿನೋದ**

ಎಳೆಯ ವಯಸ್ಸಿನವರು ದೈಹಿಕವಾಗಿ; ಬೌದ್ಧಿಕವಾಗಿ, ಸಾಮಾಜಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ವಿಕಾಸಗೊಳ್ಳಲು ನೆರವಾಗುವ ತನ್ನ ಉದ್ದೇಶವನ್ನು ಸ್ಕೌಟ್, ಗೈಡ್ ಚಳವಳಿ ವಿನೋದ, ವಿಹಾರಗಳ ಮೂಲಕ ಸಾಧಿಸುತ್ತದೆ.

**ವಯಸ್ಕರಿಗೆ ಒಂದು ಸವಾಲು**



ಯುವಜನಾಂಗಕ್ಕೆ ಒಂದು ಅವಕಾಶ. ತಲೆಮಾರುಗಳ ಮಧ್ಯೆ ತಿಳಿವಳಿಕೆಯನ್ನು ಉತ್ತಮಪಡಿಸಿಕೊಳ್ಳುವ ಒಂದು ಮಾರ್ಗ. ವಯಸ್ಕನಾಯಕರು ತಮ್ಮ ಸೇವೆಯಲ್ಲಿ ಮೌಲಿಕವಾದ ತರಬೇತಿ ಮತ್ತು ಅನುಭವ ಪಡೆಯುತ್ತಾರೆ. ಇದರಿಂದ ಅವರ ವೈಯಕ್ತಿಕ ವಿಕಾಸಕ್ಕೂ ಅನುಕೂಲವಾಗುತ್ತದೆ.

**ಸ್ವಪ್ರೇರಿತ**

ಸ್ಕೌಟ್/ಗೈಡ್‌ಗಳು ಮತ್ತು ನಾಯಕರುಗಳು ಸ್ಕೌಟಿಂಗ್/ ಗೈಡಿಂಗ್‌ಅನ್ನು ಸ್ವಯಂ ಇಚ್ಛೆಯಿಂದ ಆಯ್ಕೆ ಮಾಡಿಕೊಳ್ಳುತ್ತಾರೆ.

**ರಾಜಕೀಯೇತರ**



ಸ್ಕೌಟ್/ಗೈಡ್ ಚಳವಳಿ ಯಾವುದೇ ರಾಜಕೀಯ ಪಕ್ಷ ಅಥವಾ ಸಂಸ್ಥೆಯನ್ನು ಪ್ರತಿನಿಧಿಸುವುದಿಲ್ಲ; ಅಷ್ಟೇ ಅಲ್ಲ, ಪ್ರತಿನಿಧಿಸಕೂಡದು ಎಂಬುದೊಂದು ಗೊತ್ತುಪಾಡು. ಸ್ಕೌಟ್/ಗೈಡ್‌ಗಳು ತಮ್ಮ ಸಮುದಾಯಕ್ಕೆ, ಸಮಾಜಕ್ಕೆ ಮತ್ತು ದೇಶಕ್ಕೆ ರಚನಾತ್ಮಕ ಕೊಡುಗೆ ನೀಡುವಂತೆ ಅವರನ್ನು ಪ್ರೋತ್ಸಾಹಿಸಲಾಗುತ್ತದೆ.

**ಒಂದು ವಿಧಾನ : ವೈಯಕ್ತಿಕ ಬದ್ಧತೆ**

* ಸ್ಕೌಟ್ / ಗೈಡ್ ಪ್ರತಿಜ್ಞೆ ಮತ್ತು ನಿಯಮಗಳು ಜೀವನದ ಒಂದು ಸರಳ ಸಂಹಿತೆ.

### ಮಾಡುತ್ತಾ ಕಲಿಯುವುದು

* ಇತರರೊಡನೆ ಕ್ರಿಯಾಶೀಲ ಪಾಲುಗೊಳ್ಳುವಿಕೆ.
* ನಾಯಕತ್ವ, ಗುಂಪು ಕುಶಲತೆ ಮತ್ತು ವೈಯಕ್ತಿಕ ಹೊಣೆಗಾರಿಕೆಯನ್ನು ಗಸ್ತು ದಳದಲ್ಲಿ ಬೆಳೆಸುವುದು.

### ಉತ್ತೇಜಕ ಕಾರ್ಯಕ್ರಮಗಳು

* ಯುವಜನರ ಆಸಕ್ತಿಯನ್ನು ಆಧರಿಸಿದ ಪ್ರಗತಿಪರ ಚಟುವಟಿಕೆಗಳು. ಸರಳತೆ, ಸೃಜನಶೀಲತೆ ಮತ್ತು ಪರಿಶೋಧಕತೆಗಳು ಒಟ್ಟುಗೂಡಿ, ಸಾಹಸ ಮತ್ತು ಸವಾಲುಗಳನ್ನು ಒದಗಿಸುವ ಒಂದು ಸಮೃದ್ಧ ಕಲಿಕೆಯ ಹಾಗೂ ನಿಸರ್ಗಕ್ಕೆ ಸಂಬಂಧಿಸಿದ ಚಟುವಟಿಕೆಗಳು.

### ಒಂದು ಜೀವನ ಸಂಹಿತೆ

i. **ಒಂದು ಆಧ್ಯಾತ್ಮಿಕ ಆಯಾಮ:** ಭೌತಿಕ ಜಗತ್ತನ್ನು ಮೀರಿದ ಜೀವನದ ಆಧ್ಯಾತ್ಮಿಕ ಮೌಲ್ಯವನ್ನು ಹುಡುಕುವ ಒಂದು ಬದ್ಧತೆ.

ii. **ಒಂದು ಸಾಮಾಜಿಕ ಆಯಾಮ:** ಇತರರ ಘನತೆಯನ್ನು ಮತ್ತು ನಿಸರ್ಗ ಜಗತ್ತಿನ ಪೂರ್ಣತೆಯನ್ನು ಗೌರವಿಸುತ್ತ ಸಮಾಜದ ಪ್ರಗತಿಯಲ್ಲಿ ಪಾಲುಗೊಳ್ಳುವುದು. ಸ್ಥಳೀಯ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಶಾಂತಿ, ಸೌಹಾರ್ದತೆ ಮತ್ತು ಸಹಕಾರಗಳನ್ನು ಅಭಿವೃದ್ಧಿಪಡಿಸುವುದು.



### ಒಂದು ವೈಯಕ್ತಿಕ ಆಯಾಮ

ವೈಯಕ್ತಿಕ ಹೊಣೆಗಾರಿಕೆಯ ಪ್ರಜ್ಞೆಯನ್ನು ಬೆಳೆಸುವುದು ಮತ್ತು ಜವಾಬ್ದಾರಿಯುತ ಸ್ವಯಂ ಅಭಿವ್ಯಕ್ತಿಯ ಅಪೇಕ್ಷೆಯನ್ನು ಉತ್ತೇಜಿಸುವುದು.

### ಸ್ಕೌಟ್ಸ್ ಮತ್ತು ಗೈಡ್ಸ್‌ಗಳ, ರೋವರ್ / ರೇಂಜರ್‌ಗಳ ಪಾತ್ರ

**ವಾಸ್ತವ ಅಗತ್ಯಗಳನ್ನು ಪೂರೈಸುವುದು:** ಸ್ಕೌಟ್ ಮತ್ತು ಗೈಡ್‌ಗಳು, ರೋವರ್ / ರೇಂಜರ್‌ಗಳು ತಾವಿರುವ ಸಮುದಾಯಗಳು ಎದುರಿಸುವ ಅನೇಕ ವಿಷಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ.

ಪರಸ್ಪರ ಗುರಿಸಾಧನೆಗಾಗಿ ಸ್ಕೌಟ್ಸ್-ಗೈಡ್ಸ್‌ಗಳು, ರೋವರ್ಸ್-ರೇಂಜರ್ಸ್‌ಗಳು ಸಮುದಾಯದಲ್ಲಿ ಇತರರೊಂದಿಗೆ ಕೆಲಸ ಮಾಡುತ್ತಾರೆ.

### ಸ್ಕೌಟ್ ಮತ್ತು ಗೈಡ್‌ಗಳು ತೊಡಗುವ ಚಟುವಟಿಕೆಗಳು



1. ಸ್ವಚ್ಛತಾ ಕಾರ್ಯಕ್ರಮ 2. ಆರೋಗ್ಯ [ಪಲ್ಸ್ ಪೋಲಿಯೊ ಹನಿ ನೀಡಿಕೆ ಕಾರ್ಯಕ್ರಮ], ಮೌಖಿಕ ಜಲೀಕರಣ ಚಿಕಿತ್ಸೆ- (ಓರಲ್ ರಿಹೈಡ್ರೇಷನ್ ಥೆರಪಿ ಇತ್ಯಾದಿ) 3. ಸಾಕ್ಷರತೆ 4. ಸಸಿ ನೆಡುವುದು 5. ಪರಿಸರ ಸಂರಕ್ಷಣೆ 6. ಏಡ್ಸ್ ರೋಗ ಜಾಗೃತಾ ಕಾರ್ಯಕ್ರಮ 7. ಕುಷ್ಠರೋಗ ನಿವಾರಣೆ 8. ಕುಡಿಯುವ ನೀರಿನ ಸಂರಕ್ಷಣೆ ಮತ್ತು ಜಾಗೃತಿ ಬಗ್ಗೆ ಪ್ರಚಾರ 9. ಕುಟುಂಬ ಜೀವನ ಶಿಕ್ಷಣ 10. ಸಮುದಾಯ ಸೇವೆ 11. ನೇತ್ರ ಶಸ್ತ್ರಚಿಕಿತ್ಸಾ ಶಿಬಿರ 12. ರಕ್ತದಾನ ಶಿಬಿರ ಇತ್ಯಾದಿ ಚಟುವಟಿಕೆಗಳು.

# ಮೂಲಭೂತ ತತ್ವಗಳು



**ವಿವರಣೆ:** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು, ಯುವಜನತೆಗಾಗಿರುವ, ಸ್ವಯಂಪ್ರೇರಿತವಾದ, ರಾಜಕೀಯವಲ್ಲದ, ಶೈಕ್ಷಣಿಕ ಚಳವಳಿಯಾಗಿದೆ. ಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್ಲರು 1907ರಲ್ಲಿ ಕಲ್ಪಿಸಿಕೊಂಡ ಉದ್ದೇಶ, ಸಿದ್ಧಾಂತ ಮತ್ತು ವಿಧಾನಗಳಿಗೆ ಅನುಗುಣವಾಗಿರುವ, ಯಾವುದೇ ಜನಾಂಗ ಅಥವಾ ಮತಗಳ ಭೇದವಿಲ್ಲದ, ಎಲ್ಲರಿಗೂ ಮುಕ್ತವಾಗಿರುವ ಸ್ವಯಂಸೇವಾ ಸಂಸ್ಥೆಯಾಗಿದೆ.

**ಉದ್ದೇಶಗಳು:** ವೈಯಕ್ತಿಕವಾಗಿ, ಜವಾಬ್ದಾರಿಯುತ ಪ್ರಜೆಗಳಾಗಿ ಹಾಗೂ ಸ್ಥಳೀಯ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಸಮುದಾಯದ ಸದಸ್ಯರಾಗಿ, ತಮ್ಮಲ್ಲಿ ಅಡಗಿರುವ ಶಾರೀರಿಕ, ಮಾನಸಿಕ, ಸಾಮಾಜಿಕ, ಭಾವನಾತ್ಮಕ ಹಾಗೂ ಪಾರಮಾರ್ಥಿಕ ಚೈತನ್ಯಗಳನ್ನು ಪೂರ್ಣವಾಗಿ ಅಭಿವೃದ್ಧಿಪಡಿಸಿಕೊಳ್ಳುವಲ್ಲಿ ಯುವಜನತೆಯ ಬೆಳವಣಿಗೆಗೆ ಸಹಕರಿಸುವುದೇ ಚಳವಳಿಯ ಉದ್ದೇಶವಾಗಿದೆ.



**ತತ್ವಗಳು:** ಸ್ಕೌಟ್-ಗೈಡ್ ಚಳವಳಿಯು ಈ ಕೆಳಕಂಡ 3 ಸಿದ್ಧಾಂತಗಳ ಮೇಲೆ ಆಧಾರಿತವಾಗಿದೆ.

I. **ದೇವರಿಗೆ ಕರ್ತವ್ಯ:** ಪಾರಮಾರ್ಥಿಕ ತತ್ತ್ವಗಳ ಅವಲಂಬನೆ, ಆ ತತ್ತ್ವಗಳನ್ನು ನಿರೂಪಿಸುವ ಧರ್ಮಕ್ಕೆ ನಿಷ್ಠೆ ಹಾಗೂ ಅದರಿಂದ ಉದ್ಭವಿಸಬಹುದಾದ ಕರ್ತವ್ಯಗಳನ್ನು ಅಂಗೀಕರಿಸುವುದು.

ಸೂಚನೆ: ಅಪೇಕ್ಷಿಪಟ್ಟರೆ "ದೇವರು" ಪದಕ್ಕೆ ಬದಲಾಗಿ "ಧರ್ಮ" ಪದವನ್ನು ಬಳಸಬಹುದು.

ii. **ದೇಶಕ್ಕೆ / ಇತರರಿಗೆ ಕರ್ತವ್ಯ:** ಸ್ಥಳೀಯ, ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಶಾಂತಿ, ಅರಿವು ಮತ್ತು ಸಹಕಾರಗಳ ಬೆಳವಣಿಗೆಯೊಂದಿಗೆ ಸಾಮರಸ್ಯ ಹೊಂದಿದ ರಾಷ್ಟ್ರನಿಷ್ಠೆ.

ತನ್ನ ಸಹಚರರ ಘನತೆಗೆ ಹಾಗೂ ಪ್ರಾಕೃತಿಕ ಪ್ರಪಂಚದ ಸಮಗ್ರತೆಗೆ ಮಾನ್ಯತೆ ಮತ್ತು ಗೌರವದೊಡನೆ ಸಮಾಜದ ಅಭಿವೃದ್ಧಿಯಲ್ಲಿ ಪಾತ್ರವಹಿಸುವಿಕೆ.

iii. **ಸ್ವಕರ್ತವ್ಯ:** ವೈಯಕ್ತಿಕ ವ್ಯಕ್ತಿತ್ವದ ಬೆಳವಣಿಗೆಯ ಜವಾಬ್ದಾರಿ.

**ವಿಧಾನ:**

ಈ ಕೆಳಗಿನ ಅಂಶಗಳ ಮೂಲಕ ಪ್ರಗತಿಪರ ಸ್ವಶಿಕ್ಷಣದ ಕ್ರಮವೇ ಸ್ಕೌಟ್-ಗೈಡ್ ವಿಧಾನವಾಗಿದೆ.



- ಪ್ರತಿಜ್ಞೆ ಮತ್ತು ನಿಯಮ
- ಮಾಡುವುದರಿಂದ ಕಲಿಯುವಿಕೆ
- ವಯಸ್ಕ ನಾಯಕತ್ವದಲ್ಲಿ ಪ್ರಗತಿಪರ ಆವಿಷ್ಕಾರವನ್ನು ಒಳಗೊಂಡ ಸಣ್ಣ ಗುಂಪುಗಳ ಸದಸ್ಯತ್ವ ಮತ್ತು ಉತ್ತೇಜಕ ಕಾರ್ಯಕ್ರಮಗಳು
- ಪ್ರಕೃತಿಯೊಂದಿಗೆ ಸಂಪರ್ಕ ಹೊಂದಿದ, ಹೊರಾವರಣದಲ್ಲಿಯೇ ಹೆಚ್ಚಾಗಿ ನಡೆಸುವ ಆಟಗಳು, ಉಪಯುಕ್ತ ಕೌಶಲ್ಯಗಳು ಮತ್ತು ಸಮುದಾಯ ಸೇವೆಗಳನ್ನು ಒಳಗೊಂಡಿರುವ, ಭಾಗಿಯಾಗಿರುವವರ ಆಸಕ್ತಿಗಳನ್ನು ಆಧರಿಸಿದ ವಿವಿಧ ಚಟುವಟಿಕೆಗಳ ಪ್ರಗತಿಪರ ಹಾಗೂ ಉತ್ತೇಜಕ ಕಾರ್ಯಕ್ರಮಗಳು.

**ಪ್ರತಿಜ್ಞೆ :**

ಅ. **ಸ್ಕೌಟ್ ಮತ್ತು ರೋವರ್‌ಗಳಿಗಾಗಿ ಪ್ರತಿಜ್ಞೆ ಹೀಗಿದೆ:**

"ದೇವರಿಗೆ ಮತ್ತು ನನ್ನ ದೇಶಕ್ಕೆ ನನ್ನ ಕರ್ತವ್ಯ ಮಾಡಲು, ಇತರರಿಗೆ ಸಹಾಯ ಮಾಡಲು, ಸ್ಕೌಟ್ ನಿಯಮವನ್ನು ಪಾಲಿಸಲು ನನ್ನ ಕೈಲಾದಮಟ್ಟಿಗೆ ಪ್ರಯತ್ನ ಮಾಡುತ್ತೇನೆಂದು ನನ್ನ ಗೌರವಸಾಕ್ಷಿಯಾಗಿ ಪ್ರತಿಜ್ಞೆ ಮಾಡುತ್ತೇನೆ".



ಆ. **ಗೈಡ್ ಮತ್ತು ರೇಂಜರ್‌ಗಳಿಗಾಗಿ ಪ್ರತಿಜ್ಞೆ ಹೀಗಿದೆ:**

"ದೇವರಿಗೆ ಮತ್ತು ನನ್ನ ದೇಶಕ್ಕೆ ನನ್ನ ಕರ್ತವ್ಯ ಮಾಡಲು, ಇತರರಿಗೆ ಸಹಾಯ ಮಾಡಲು ಹಾಗೂ ಗೈಡ್ ನಿಯಮವನ್ನು ಪಾಲಿಸಲು ನನ್ನ ಕೈಲಾದ ಮಟ್ಟಿಗೆ ಪ್ರಯತ್ನ ಮಾಡುತ್ತೇನೆಂದು ನನ್ನ ಗೌರವಸಾಕ್ಷಿಯಾಗಿ ಪ್ರತಿಜ್ಞೆ ಮಾಡುತ್ತೇನೆ".



ಇ. **ಮರಿಗಳಿಗಾಗಿ ಪ್ರತಿಜ್ಞೆ ಹೀಗಿದೆ:**

"ನಾನು ನನ್ನ ಕೈಲಾದ ಮಟ್ಟಿಗೆ ದೇವರಿಗೆ ಮತ್ತು ನನ್ನ ದೇಶಕ್ಕೆ ನನ್ನ ಕರ್ತವ್ಯ ಮಾಡಲು ಮರಿಗಳ ನಿಯಮವನ್ನು ಪಾಲಿಸಲು ಮತ್ತು ಪ್ರತಿದಿನವೂ ಒಂದು ಉಪಕಾರವನ್ನು ಮಾಡಲು ಪ್ರಯತ್ನ ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡುತ್ತೇನೆ".

ಈ. **ಬುಲ್‌ಬುಲ್‌ಗಳಿಗಾಗಿ ಪ್ರತಿಜ್ಞೆ ಹೀಗಿದೆ:**

"ನಾನು ನನ್ನ ಕೈಲಾದ ಮಟ್ಟಿಗೆ ದೇವರಿಗೆ ಮತ್ತು ನನ್ನ ದೇಶಕ್ಕೆ ನನ್ನ ಕರ್ತವ್ಯ ಮಾಡಲು, ಬುಲ್‌ಬುಲ್ ನಿಯಮವನ್ನು ಪಾಲಿಸಲು ಮತ್ತು ಪ್ರತಿದಿನವೂ ಒಂದು ಉಪಕಾರವನ್ನು ಮಾಡಲು ಪ್ರಯತ್ನಿಸುತ್ತೇನೆ ಎಂದು ಪ್ರತಿಜ್ಞೆ ಮಾಡುತ್ತೇನೆ".

**ಸೂಚನೆ:**

1. ಅಪೇಕ್ಷೆಪಟ್ಟಲ್ಲಿ 'ದೇವರು' ಪದದ ಬದಲಾಗಿ 'ಧರ್ಮ' ಪದವನ್ನು ಬಳಸಬಹುದು.
2. ದೀಕ್ಷೆಯ ಸಂದರ್ಭದಲ್ಲಿ ಪ್ರತಿಜ್ಞೆ ಕೈಗೊಳ್ಳಬೇಕು ಮತ್ತು ಈ ಮೊದಲೇ ಸ್ಕೌಟ್ ಅಥವಾ ಗೈಡ್ ಆಗಿರುವ ರೋವರ್ ಅಥವಾ ರೇಂಜರ್‌ಗಳ ವಿಷಯದಲ್ಲಿ ಪ್ರತಿಜ್ಞೆಯನ್ನು ಪುನರ್ ದೃಢೀಕರಿಸಬೇಕು.

**ನಿಯಮಗಳು:**

## ಅ. ಸ್ಕೌಟ್ ಮತ್ತು ರೋವರ್ ನಿಯಮ:



1. ಸ್ಕೌಟ್ ವಿಶ್ವಾಸಾರ್ಹನು.
2. ಸ್ಕೌಟ್ ನಿಷ್ಠಾವಂತನು.
3. ಸ್ಕೌಟ್ ಎಲ್ಲರಿಗೂ ಸ್ನೇಹಿತನು ಮತ್ತು ಇತರ ಸ್ಕೌಟ್‌ನ ಸೋದರನು.
4. ಸ್ಕೌಟ್ ವಿನಯಶೀಲನು.
5. ಸ್ಕೌಟ್ ಪ್ರಾಣಿಗಳ ಸ್ನೇಹಿತನು ಮತ್ತು ಪ್ರಕೃತಿ ಪ್ರೇಮಿಯು.
6. ಸ್ಕೌಟ್ ಶಿಸ್ತುಳ್ಳವನು ಮತ್ತು ಸಾರ್ವಜನಿಕ ಆಸ್ತಿಯನ್ನು ರಕ್ಷಿಸಲು ನೆರವಾಗುವನು.
7. ಸ್ಕೌಟ್ ಧೈರ್ಯಶಾಲಿಯು.
8. ಸ್ಕೌಟ್ ಮಿತವ್ಯಯಿ.
9. ಸ್ಕೌಟ್ ಕಾಯಾ, ವಾಚಾ, ಮನಸಾ ಪರಿಶುದ್ಧನು.

## ಆ. ಗೈಡ್ ಮತ್ತು ರೇಂಜರ್ ನಿಯಮ:

1. ಗೈಡ್ ವಿಶ್ವಾಸಾರ್ಹಳು.
2. ಗೈಡ್ ನಿಷ್ಠಾವಂತಳು.
3. ಗೈಡ್ ಎಲ್ಲರಿಗೂ ಸ್ನೇಹಿತಳು ಮತ್ತು ಪ್ರತಿಯೊಬ್ಬ ಗೈಡಳ ಸೋದರಿಯು.
4. ಗೈಡ್ ವಿನಯಶೀಲಳು.
5. ಗೈಡ್ ಪ್ರಾಣಿಗಳ ಸ್ನೇಹಿತಳು ಮತ್ತು ಪ್ರಕೃತಿ ಪ್ರೇಮಿಯು.
6. ಗೈಡ್ ಶಿಸ್ತುಳ್ಳವಳು ಮತ್ತು ಸಾರ್ವಜನಿಕ ಆಸ್ತಿಯನ್ನು ರಕ್ಷಿಸಲು ನೆರವಾಗುವಳು.
7. ಗೈಡ್ ಧೈರ್ಯಶಾಲಿಯು.
8. ಗೈಡ್ ಮಿತವ್ಯಯಿ.
9. ಗೈಡ್ ಕಾಯಾ, ವಾಚಾ, ಮನಸಾ ಪರಿಶುದ್ಧಳು.

## ಇ. ಮರಿಗಳ ನಿಯಮ:

1. ಮರಿಯು (ಹಿರಿಯರಿಗೆ) ವಿಧೇಯನು.
2. ಮರಿಯು ನಿರ್ಮಲನು ಮತ್ತು ವಿನಯಿ.

## ಈ. ಬುಲ್‌ಬುಲ್ ನಿಯಮ:

1. ಬುಲ್‌ಬುಲ್ (ಹಿರಿಯರಿಗೆ) ವಿಧೇಯಳು.
2. ಬುಲ್‌ಬುಲ್ ನಿರ್ಮಲಳು ಮತ್ತು ವಿನಯಿ.

## ಸಹಭಾಗಿತ್ವದ ನಾಲ್ಕು ಬಂಧಗಳು

### ಧ್ಯೇಯ ಸೂತ್ರ

"ಕೈಲಾದಷ್ಟು ಸಾಧಿಸಿ" ಎನ್ನುವುದು ಕಬ್-ಬುಲ್‌ಬುಲ್‌ಗಳ ಧ್ಯೇಯ ಸೂತ್ರ.

"ಸಿದ್ಧವಾಗಿರು" ಎನ್ನುವುದು ಸ್ಕೌಟ್‌ಗಳ ಧ್ಯೇಯ ಸೂತ್ರ.

"ಸೇವೆ" ಎನ್ನುವುದು ರೋವರ್-ರೇಂಜರ್‌ಗಳ ಧ್ಯೇಯ ಸೂತ್ರ.

### ವಂದನೆ



ಸ್ಕೌಟ್ ಮತ್ತು ಗೈಡ್ ಪ್ರತಿಜ್ಞೆಯ ಮೂರು ಭಾಗಗಳ ನೆನಪಿಗಾಗಿ ಬಲಗೈನ ಮೂರು ಬೆರಳುಗಳನ್ನು ಮೇಲಕ್ಕೆ ಎತ್ತಿರಬೇಕು. ಕಿರುಬೆರಳನ್ನು ಹೆಬ್ಬೆರಳು ಒತ್ತಿಹಿಡಿದಿರಬೇಕು, ತೋರುಬೆರಳು ಬಲಹುಬ್ಬಿನ ಮೇಲೆ ಇರಬೇಕು. ಚಳವಳಿಯ ಎಲ್ಲ ಸದಸ್ಯರೂ ಇದನ್ನು ಅನುಸರಿಸಬೇಕು. ಹೀಗೆ ವಂದಿಸಬೇಕು.



ಕಬ್-ಬುಲ್‌ಬುಲ್‌ಗಳು ತೋರುಬೆರಳು ಮತ್ತು ಮಧ್ಯದ ಬೆರಳನ್ನು ಅಗಲಿಸಿ ಉಂಗುರದ ಬೆರಳು ಮತ್ತು ಕಿರುಬೆರಳಿನ ಮೇಲೆ ಹೆಬ್ಬೆರಳನ್ನು ಇಟ್ಟು ವಂದಿಸುತ್ತಾರೆ. ಆ ಎರಡು ಬೆರಳುಗಳು ಕಬ್-ಬುಲ್‌ಬುಲ್‌ಗಳ ನಿಯಮದ ಅಂಶಗಳನ್ನು ಪ್ರತಿನಿಧಿಸುತ್ತದೆ.

### ಸಂಕೇತ



ಸಂಕೇತವು ವಂದನೆಯಂತೆಯೇ ಇರುತ್ತದೆ. ತೋಳಿನ ಮಟ್ಟಕ್ಕೆ ಸಮವಾಗಿ ಲಂಬರೂಪದಲ್ಲಿ ಬಲಗೈ ಇರಬೇಕು. ಇದನ್ನು ಸ್ಕೌಟ್ ಮತ್ತು ಗೈಡ್ ಚಳವಳಿಯ ಎಲ್ಲ ಸದಸ್ಯರೂ ಪ್ರತಿಜ್ಞೆ ಕೈಗೊಳ್ಳುವಾಗ ಅಥವಾ ನವೀಕರಿಸುವಾಗ ಮಾತ್ರ ಅನುಸರಿಸಬೇಕು.

### ಎಡಗೈ ಕುಲುಕುವುದು



ಸ್ಕೌಟ್ ಮತ್ತು ಗೈಡ್‌ಗಳು ಪರಸ್ಪರ ಎಡಗೈ ಕುಲುಕುವುದು ಅವರಲ್ಲಿ ಪರಸ್ಪರ ಇರುವ ವಿಶೇಷವಾದ ಅಭಿವ್ಯಕ್ತಿಯಾಗಿದೆ. ಇದು ಚಳವಳಿಯ ಸದಸ್ಯರೆಲ್ಲ ಪರಸ್ಪರ ಸ್ನೇಹದ ಅಭಿವಂದನೆಯಲ್ಲಿ ವಿಶ್ವದಾದ್ಯಂತ ಅನುಸರಿಸುತ್ತಿರುವ ಸ್ಥಾಪಿತ ಪದ್ಧತಿ.




## ವಿವಿಧ ವಿಭಾಗಗಳು ಮತ್ತು ಬಾಲಕ-ಬಾಲಕಿಯರ ಕಾರ್ಯಕ್ರಮದ ಮುನ್ನಡೆ

### ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಉದ್ದೇಶ ಸಾಧನೆಗಾಗಿ ಪ್ರಗತಿಪರ ತರಬೇತಿ ನೀಡಲಾಗುತ್ತದೆ

**ಬನ್ನಿಗಳು (ಮೊಲದ ಮರಿಗಳು) (3 ರಿಂದ 5 ವರ್ಷದ ಬಾಲಕ –ಬಾಲಕಿಯರು):**

3 ರಿಂದ 5 ವರ್ಷದ ಬಾಲಕ–ಬಾಲಕಿಯರು ಆಡುತ್ತಾ, ಹಾಡುತ್ತಾ, ಕುಣಿಯುತ್ತಾ, ವೈಯಕ್ತಿಕ ಸ್ವಚ್ಛತೆ, ಶಿಸ್ತು ಮತ್ತು ಶಿಷ್ಟಾಚಾರವನ್ನು ಕಲಿಯುವುದೇ ಪ್ರಧಾನ ಚಟುವಟಿಕೆ. ಈ ಗುಂಪಿನ ನಾಯಕಿಯನ್ನು "ಬನ್ನಿ ಆಂಟಿ" ಎಂದು ಕರೆಯಲಾಗುತ್ತದೆ ಮತ್ತು ಗುಂಪಿಗೆ "ಟಂಟೋಲಾ" ಎನ್ನುತ್ತೇವೆ.

**ಧ್ಯೇಯ ಸೂತ್ರ: "ಸದಾ ನಗುತ್ತಿರು"**

**ಕಬ್ಸ್ ಮತ್ತು ಬುಲ್‌ಬುಲ್ಸ್ (5ರಿಂದ 10 ವರ್ಷದ ಬಾಲಕ–ಬಾಲಕಿಯರು):**

ಪ್ರವೇಶದಿಂದ ಚತುರ್ಥ ಚರಣ್‌ವರೆಗೆ ಮತ್ತು ಪ್ರವೇಶದಿಂದ ಹೀರಕ್ ಪಂಖ್‌ವರೆಗೆ. ಈ ತರಬೇತಿಗೆ ಒಂದು ಹಿಂಡಿನಲ್ಲಿ ಸೂಕ್ತ ಸಂಖ್ಯೆ–24. ಸಾಮಾನ್ಯವಾಗಿ 6 ಮಕ್ಕಳ ಷಟ್ಕ (ಗುಂಪು)ಗಳ ಆಧಾರದ ಮೇಲೆ ಈ ತರಬೇತಿ ನಡೆಯುತ್ತದೆ. ಪ್ರತಿ ಗುಂಪಿಗೂ ಓರ್ವ ಆರಾಳಿ **(Sixer)** (ನಾಯಕ) ಮತ್ತು ಓರ್ವ ಸಹಾಯಕರಿರುತ್ತಾರೆ. ಸಣ್ಣ ಗುಂಪುಗಳಲ್ಲಿ ಕೆಲಸ ಮಾಡಲು ಮತ್ತು ನಾಯಕತ್ವ ವಹಿಸಲು ಇದು ನೆರವಾಗುತ್ತದೆ. ವಯಸ್ಕ ನಾಯಕ/ನಾಯಕಿಯನ್ನು ಕಬ್‌ಮಾಸ್ಟರ್ / ಫ್ಲಾಕ್ ಲೀಡರ್ ಎಂದು ಕರೆಯಲಾಗುತ್ತದೆ.

**ಧ್ಯೇಯ ಸೂತ್ರ : "ಕೈಲಾದಷ್ಟು ಸಾಧಿಸಿ."**

### ಸ್ಕೌಟ್ಸ್ ಮತ್ತು ಗೈಡ್ಸ್ (10ರಿಂದ 17 ವರ್ಷದ ಬಾಲಕ-ಬಾಲಕಿಯರು):

ಪ್ರವೇಶದಿಂದ ರಾಜ್ಯ ಪುರಸ್ಕಾರ ಮತ್ತು ರಾಷ್ಟ್ರಪತಿ ಪ್ರಶಸ್ತಿಯವರೆಗೆ ಸೂಕ್ತವಾದ ಸಂಖ್ಯೆ 32. ದಳಗಳಲ್ಲಿ 6ರಿಂದ 8 ಜನ ಸ್ಕೌಟ್/ಗೈಡ್‌ಗಳ ಪಟಾಲಂಗಳಿರುತ್ತವೆ. ಪ್ರತಿಯೊಂದು ಪಟಾಲಂಗೆ ಒಬ್ಬರು ನಾಯಕರು ಮತ್ತು ಸಹಾಯಕ ನಾಯಕರಿರುತ್ತಾರೆ. ಇಲ್ಲಿ ತನ್ನ ಪಟಾಲಂ ನಾಯಕತ್ವ ಮತ್ತು ತರಬೇತಿ ಒದಗಿಸುವಲ್ಲಿ ಪಟಾಲಂ ಮುಖಂಡರಿಗೆ ಸಾಕಷ್ಟು ಜವಾಬ್ದಾರಿ ಇರುತ್ತದೆ. ವಯಸ್ಕ ನಾಯಕರಿಗೆ ಸ್ಕೌಟ್ ಮಾಸ್ಟರ್/ ನಾಯಕಿಯರಿಗೆ ಗೈಡ್ ಕ್ಯಾಪ್ಟನ್ ಎಂದು ಕರೆಯಲಾಗುತ್ತದೆ.

**ಧ್ಯೇಯ ಸೂತ್ರ: "ಸದಾ ಸಿದ್ಧವಾಗಿರು."**

### ರೋವರ್ಸ್ ಮತ್ತು ರೇಂಜರ್ಸ್ (15ರಿಂದ 25 ವರ್ಷದ ಯುವಕ-ಯುವತಿಯರು):

ಪ್ರವೇಶದ ಹಂತದಿಂದ ರಾಜ್ಯ ಪುರಸ್ಕಾರ ನಿಪುಣ್ ಹಂತದವರೆಗೆ ಮತ್ತು ರಾಷ್ಟ್ರಪತಿ ರೇಂಜರ್ / ರೋವರ್ ಪ್ರಶಸ್ತಿಯವರೆಗೆ. ಒಂದು ತಂಡದಲ್ಲಿ ಸೂಕ್ತ ಸಂಖ್ಯೆ 6 ರಿಂದ 24. ಈ ವಿಭಾಗದಲ್ಲಿ ಮುಖ್ಯವಾಗಿ ಸ್ವಯಂ ಕಾರ್ಯಕ್ರಮ ಯೋಜನೆ ಮತ್ತು ಆಡಳಿತವಿರುತ್ತದೆ. ವಯಸ್ಕ ನಾಯಕ/ನಾಯಕಿಗೆ ರೋವರ್ ಸ್ಕೌಟ್ ಲೀಡರ್/ ರೇಂಜರ್ ಲೀಡರ್ ಎಂದು ಕರೆಯಲಾಗುತ್ತದೆ.

**ಧ್ಯೇಯ ಸೂತ್ರ: "ಸೇವೆ."**

### ಘಟಕಗಳನ್ನು ಪ್ರಾರಂಭಿಸುವುದು ಹೇಗೆ?

ಶಾಲಾ-ಕಾಲೇಜುಗಳಲ್ಲಾಗಲಿ ಅಥವಾ ಮುಕ್ತವಾಗಿ ಆಗಲಿ ಯಾವುದೇ ಘಟಕ ಪ್ರಾರಂಭಿಸಬೇಕಾದಲ್ಲಿ (ಕಬ್-ಬುಲ್‌ಬುಲ್/ ಸ್ಕೌಟ್-ಗೈಡ್/ ರೋವರ್-ರೇಂಜರ್) ಸಂಬಂಧಪಟ್ಟ ಘಟಕ ನಾಯಕರುಗಳು 7 ದಿವಸಗಳ ಮೂಲ ತರಬೇತಿಯನ್ನು ಪಡೆಯಬೇಕು. (ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್/ ಕಬ್ ಮಾಸ್ಟರ್, ಫ್ಲಾಕ್ ಲೀಡರ್, ರೋವರ್ ಲೀಡರ್, ರೇಂಜರ್ ಲೀಡರ್) ನಂತರ ಘಟಕಗಳನ್ನು ನೋಂದಣಿ ಮಾಡಿಸಬೇಕು. ಘಟಕ ನಾಯಕರು ಸನ್ನದಿಗಾಗಿ ಜಿಲ್ಲೆ ಮುಖಾಂತರ ಅರ್ಜಿ ಸಲ್ಲಿಸಬೇಕು. ಪ್ರತೀ ವರ್ಷ ಜೂನ್ ಅಥವಾ ಜುಲೈ ತಿಂಗಳಿನಲ್ಲಿ ನವೀಕರಣ ಶುಲ್ಕವನ್ನು ಪಾವತಿಮಾಡಿ ದಳಗಳ / ಘಟಕಗಳ ನೋಂದಣಿಯನ್ನು ನವೀಕರಿಸಿಕೊಳ್ಳಬೇಕು.

# ಕಬ್ ಮತ್ತು ಬುಲ್‌ಬುಲ್‌ಗಳ ಪ್ರಗತಿಪರ ಯೋಜನೆ






# ಸ್ಕೌಟ್-ಗೈಡ್ ಮತ್ತು ರೋವರ್-ರೇಂಜರ್‌ಗಳ ಪ್ರಗತಿಪರ ಪದಕಗಳು



# ರಾಜ್ಯ ಮತ್ತು ರಾಷ್ಟ್ರ ಪ್ರಶಸ್ತಿಗಳು



ಮರಿ (ಕಬ್)ಗಳಿಗೆ ಚತುರ್ಥ ಚರಣ್ ಪ್ರಶಸ್ತಿ




ಹಕ್ಕಿ (ಬುಲ್‌ಬುಲ್)ಗಳಿಗೆ
ಹೀರಕ್ ಪಂಖ್ ಪ್ರಶಸ್ತಿ




ಸ್ಕೌಟ್ ಮತ್ತು ಗೈಡ್‌ಗಳಿಗೆ
ರಾಜ್ಯ ಪುರಸ್ಕಾರ ಪ್ರಶಸ್ತಿ




ರೋವರ್ ಮತ್ತು ರೇಂಜರ್‌ಗಳಿಗೆ
ರಾಜ್ಯ ಪುರಸ್ಕಾರ ಪ್ರಶಸ್ತಿ







ಸ್ಕೌಟ್ ಮತ್ತು ಗೈಡ್‌ಗಳಿಗೆ ರಾಷ್ಟ್ರಪತಿ ಪ್ರಶಸ್ತಿ





ರೋವರ್ ಮತ್ತು ರೇಂಜರ್‌ಗಳಿಗೆ ರಾಷ್ಟ್ರಪತಿ ಪ್ರಶಸ್ತಿ




ರೋವರ್ ಮತ್ತು ರೇಂಜರ್
ಘಟಕಗಳಿಗೆ ಸಮುದಾಯ ಸೇವೆಯ
ಉಪರಾಷ್ಟ್ರಪತಿ ಪ್ರಶಸ್ತಿ



ಸ್ಕೌಟ್ / ಗೈಡ್ ಘಟಕಗಳ ಸ್ಪರ್ಧೆಯ
ಪ್ರಧಾನ ಮಂತ್ರಿಗಳ ಪಾರಿತೋಷಕ

# ಕರ್ನಾಟಕದಲ್ಲಿರುವ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರಗಳು

## ಡಾ. ಅನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ

ರಾಜಧಾನಿ ಬೆಂಗಳೂರಿನಿಂದ 40 ಕಿ.ಮೀ. ದೂರದಲ್ಲಿ ದೊಡ್ಡಬಳ್ಳಾಪುರದ ಬಳಿ ಈ ತರಬೇತಿ ಕೇಂದ್ರವಿದೆ. 100 ಎಕರೆಗಳಷ್ಟು ವಿಸ್ತಾರದಲ್ಲಿರುವ ಈ ಕೇಂದ್ರದಲ್ಲಿ ವಿವಿಧ ತರಬೇತಿ ಹಾಗೂ ಚಟುವಟಿಕೆಗಳನ್ನು ನಡೆಸಲು ಅಗತ್ಯವಾದ ಎಲ್ಲ ಮೂಲ ಸೌಲಭ್ಯಗಳನ್ನು ಕಲ್ಪಿಸಲಾಗಿದೆ.

**ಡಾ. ಅನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ**
**ಬೆಂಗಳೂರು ಗ್ರಾಮಾಂತರ ಜಿಲ್ಲೆ**

## ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ- ಕೊಂಡಜ್ಜಿ

ತರಬೇತಿ ಕೇಂದ್ರವು ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕಿನ ಕೊಂಡಜ್ಜಿ ಗ್ರಾಮದ ಬಳಿ ಇದೆ. 80 ಎಕರೆ ಗುಡ್ಡಗಾಡು ಪ್ರದೇಶದ ಈ ಕೇಂದ್ರದಲ್ಲಿ ಜಲ ಚಟುವಟಿಕೆಗಳೂ ಸೇರಿದಂತೆ ಎಲ್ಲ ರೀತಿಯ ತರಬೇತಿ ಹಾಗೂ ಚಟುವಟಿಕೆಗಳಿಗೆ ಮೂಲ ಸೌಲಭ್ಯಗಳಿವೆ. ಈ ತರಬೇತಿ ಕೇಂದ್ರವು ಬೆಂಗಳೂರಿನಿಂದ 273 ಕಿ.ಮೀ. ಮತ್ತು ದಾವಣಗೆರೆಯಿಂದ 13 ಕಿ.ಮೀ. ದೂರದಲ್ಲಿದೆ.

**ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ,**
**ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ.**

## ಶಾಂತಿಗೃಹ ಸ್ಕೌಟ್ಸ್/ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ಮತ್ತು ರಾಜ್ಯ ಕೇಂದ್ರ ಕಾರ್ಯಾಲಯ, # 39, ಅರಮನೆ ರಸ್ತೆ, ಬೆಂಗಳೂರು-560001

ರಾಜ್ಯದ ರಾಜಧಾನಿ ಬೆಂಗಳೂರಿನ ಅರಮನೆಯ ರಸ್ತೆಯಲ್ಲಿರುವ (ಮಹಾರಾಣಿ ವಿಜ್ಞಾನ ಕಾಲೇಜಿಗೆ ಹೊಂದಿಕೊಂಡಂತೆ) ಈ ಕೇಂದ್ರದ ವಿಸ್ತಾರ 2.59 ಎಕರೆಗಳು. ತರಬೇತಿಗೆ ಹಾಗೂ ಚಟುವಟಿಕೆಗಳಿಗೆ ಅಗತ್ಯವಾದ ಎಲ್ಲ ಮೂಲಭೂತ ಸೌಲಭ್ಯಗಳು ಇಲ್ಲಿವೆ. ರಾಜ್ಯ ಸಂಸ್ಥೆಯ ಕೇಂದ್ರ ಕಾರ್ಯಾಲಯ ಇಲ್ಲಿದೆ.

**ಶಾಂತಿಗೃಹ ರಾಜ್ಯ ತರಬೇತಿ ಕೇಂದ್ರ**
**ನಂ. 39, ಅರಮನೆ ರಸ್ತೆ, ಬೆಂಗಳೂರು-560 001**
**ದೂರವಾಣಿ: (ಕೇಂದ್ರ ಕಛೇರಿ) 080-22260017, 080-22267470**

## ದಳ ನಾಯಕರುಗಳಿಗೆ ನೀಡುವ ಪ್ರಗತಿಪರ ತರಬೇತಿಗಳ ವಿವರಗಳು

| ತರಬೇತಿಯ ವಿವರಗಳು | ಅವಧಿ | ಅವಧಿ |
|---|---|---|
| | ಸ್ಕೌಟ್ ವಿಭಾಗ | ಗೈಡ್ ವಿಭಾಗ |
| ಪ್ರಾರಂಭಿಕ ಶಿಬಿರ (Beginners Course) | 4½ ಗಂಟೆ | 4½ ಗಂಟೆ |
| ಮೂಲ ತರಬೇತಿ | 7 ದಿನಗಳು | 7 ದಿನಗಳು |
| ಮುಂದುವರೆದ ತರಬೇತಿ | 7 ದಿನಗಳು | 7 ದಿನಗಳು |
| ಹಿಮಾಲಯ ವೃಕ್ಷಮಣಿ ತರಬೇತಿ | 7 ದಿನಗಳು | 7 ದಿನಗಳು |
| ಸಹಾಯಕ ನಾಯಕ ತರಬೇತುದಾರರ ಪೂರ್ವ ತರಬೇತಿ | 5 ದಿನಗಳು | 5 ದಿನಗಳು |
| ಸಹಾಯಕ ನಾಯಕ ತರಬೇತುದಾರರ ತರಬೇತಿ | 7 ದಿನಗಳು | 7 ದಿನಗಳು |
| ನಾಯಕ ತರಬೇತುದಾರರ ತರಬೇತಿ | 7 ದಿನಗಳು | 7 ದಿನಗಳು |
| ವಯಸ್ಕ ನಾಯಕರುಗಳ ನಾಯಕರ ತರಬೇತಿ ವಿವರಗಳು | | |
| ಆಯುಕ್ತರ ಮೂಲ ತರಬೇತಿ | 5 ದಿನಗಳು | 5 ದಿನಗಳು |
| ಆಯುಕ್ತರ ಮುಂದುವರೆದ ತರಬೇತಿ | 5 ದಿನಗಳು | 5 ದಿನಗಳು |



# ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಾರ್ಥನೆ

ದಯಾ ಕರ್ ದಾನ್ ಭಕ್ತೀ ಕಾ
ಹಮೇ ಪರಮಾತ್ಮಾ ದೇನಾ ।
ದಯಾ ಕರನಾ ಹಮಾರೀ
ಆತ್ಮಾ ಮೆ ಶುದ್ಧತಾ ದೇನಾ ॥

ಹಮಾರೆ ಧ್ಯಾನ್ ಮೆ ಆವೋ
ಪ್ರಭು, ಆಂಖೋಮೆ ಬಸ್ ಜಾವೋ ।
ಆಂಧೇರೆ ದಿಲ್ ಮೆ ಆಕರ್ ಕೆ
ಪರಂಜ್ಯೋತಿ ಜಗಾದೇನಾ ॥

ಬಹಾ ದೋ ಪ್ರೇಮ್ ಕೀ ಗಂಗಾ,
ದಿಲೋ ಮೆ ಪ್ರೇಮ್ ಕಾ ಸಾಗರ್ ।
ಹಮೆ ಆಪಸ್ ಮೆ ಮಿಲ್ ಜುಲ್ ಕರ್
ಪ್ರಭು, ರೆಹನಾ ಸಿಖಾದೇನಾ ॥

ಹಮಾರಾ ಕರ್ಮ್ ಹೋ ಸೇವಾ,
ಹಮಾರಾ ಧರ್ಮ್ ಹೋ ಸೇವಾ ॥
ಸದಾ ಈಮಾನ್ ಹೋ ಸೇವಾ,
ವಹ್ ಸೇವಕ್ ಚರ್ ಬನಾದೇನಾ ॥

ವತನ್ ಕೆ ವಾಸತೆ ಜೀನಾ,
ವತನ್ ಕೆ ವಾಸತೆ ಮರನಾ ।
ವತನ್ ಪರ್ ಜಾನ್ ಫಿದಾ ಕರ್‌ನಾ
ಪ್ರಭು, ಹಮ್‌ಕೋ ಸಿಖಾ ದೇನಾ
॥ ದಯಾ ಕರ್ ॥

ರಚನೆ: ಶ್ರೀ ದಯಾಶಂಕರ್ ಭಟ್

# ಧ್ವಜಗೀತೆ

ಭಾರತ್ ಸ್ಕೌಟ್ ಗೈಡ್ ಝಂಡಾ
ಊಂಚಾ ಸದಾ ರಹೇಗಾ ।
ಊಂಚಾ ಸದಾ ರಹೇಗಾ ಝಂಡಾ
ಊಂಚಾ ಸದಾ ರಹೇಗಾ ॥

ನೀಲಾ ರಂಗ್ ಗಗನ್ ಸಾ ವಿಸ್ತೃತ
ಭಾತೃ ಭಾವ್ ಫೈಲಾತಾ ।
ತ್ರಿದಲ ಕಮಲನಿತ್ ತೀನ್
ಪ್ರತಿಜ್ಞಾವೊಂ ಕೀ ಯಾದ್ ದಿಲಾತಾ ।
ಔರ್ ಚಕ್ರ ಕಹತಾಹೈ
ಪ್ರತಿಪಲ್ ಆಗೆ ಕದಂ ಬಢೇಗಾ ॥

ಊಂಚಾ ಸದಾ ರಹೇಗಾ ಝಂಡಾ
ಊಂಚಾ ಸದಾ ರಹೇಗಾ ।
ಭಾರತ್ ಸ್ಕೌಟ್ ಗೈಡ್ ಝಂಡಾ
ಊಂಚಾ ಸದಾ ರಹೇಗಾ ॥

ರಚನೆ : ವೀರ್ ದೇವ್ ವೀರ್

# ಸಂಸ್ಥಾಪಕ ಬೇಡನ್ ಪೊವೆಲ್‌ರಿಂದ ಪೋಷಕರಿಗೆ ಸಂದೇಶ

**ನಿಮ್ಮ ಬಾಲಕ - ಬಾಲಕಿ ಸ್ಕೌಟ್ / ಗೈಡ್ ಆಗಬೇಕು, ಏಕೆಂದರೆ,**



1. ಸ್ಕೌಟ್ / ಗೈಡ್ ಶಿಕ್ಷಣವು – ನಿಮ್ಮ ಬಾಲಕ / ಬಾಲಕಿಯ ಬಿಡುವಿನ ಸಮಯವನ್ನು ಹಿತಕರ ಸಹಪಾಠಿಗಳೊಂದಿಗೆ ಆರೋಗ್ಯಕರ ಚಟುವಟಿಕೆಗಳಲ್ಲಿ ತೊಡಗಿಸುವಂತೆ ಮಾಡುತ್ತದೆ
2. ಸ್ಕೌಟ್ / ಗೈಡ್ ಶಿಕ್ಷಣವು – ಬಾಲಕ / ಬಾಲಕಿಯರ ಯಶಸ್ಸಿಗೆ ಅಗತ್ಯವಾದ ನೈತಿಕ ಬಲವನ್ನು ನೀಡುವುದಲ್ಲದೆ ಅವರ ಯಾವುದೇ ವೃತ್ತಿಯಲ್ಲಿ ಯಶಸ್ಸನ್ನು ಕೊಡುವುದು.
3. ಸ್ಕೌಟ್ / ಗೈಡ್ – ಇದು ಸೈನಿಕ ಸಂಸ್ಥೆಯಲ್ಲ. ನಾವು ಒಳ್ಳೆಯ ನಾಗರಿಕ ವ್ಯಕ್ತಿಗಳನ್ನು ರೂಪಿಸಹೊರಟಿದ್ದೇವೆಯೇ ವಿನಃ ಅನುಕರಣೆಯ ಸಿಪಾಯಿಗಳ ಒಂದು ತಂಡವನ್ನಲ್ಲ.
4. ಸ್ಕೌಟ್ / ಗೈಡ್ – ನಿಮ್ಮ ಬಾಲಕ / ಬಾಲಕಿಗೆ ಸೇವಾವಕಾಶಗಳನ್ನು ಕಲ್ಪಿಸಿಕೊಡುತ್ತದೆ. ದೇವರು ಮತ್ತು ನೆರೆಹೊರೆಯವರಲ್ಲಿ ಗೌರವ ಭಾವನೆ ಇರುವುದು ಧರ್ಮದ ಮೂಲ ಎಂದು ತಿಳಿಸುತ್ತದೆ.
5. ಸ್ಕೌಟ್ / ಗೈಡ್ – ನಿಮ್ಮ ಬಾಲಕ / ಬಾಲಕಿಯನ್ನು ಕುಶಲರನ್ನಾಗಿ ಮಾಡುತ್ತದೆ. ಅವರ ಹವ್ಯಾಸಗಳು ಮನೆಗೆ ಉಪಯುಕ್ತವಾಗುವಂತೆಯೇ ಅವರಿಗೂ ಆಸಕ್ತಿಯ ವಿಷಯಗಳಾಗುತ್ತವೆ.
6. ಸ್ಕೌಟ್ / ಗೈಡ್ – ನಿಮ್ಮ ಬಾಲಕ / ಬಾಲಕಿಯಲ್ಲಿ ಒಂದು ಗೌರವ ಮತ್ತು ನಿಷ್ಠೆಯ ಭಾವನೆಯನ್ನು ಬೆಳೆಸುತ್ತದೆ. ಅವರು ನಿಮ್ಮನ್ನು ನಿರಾಸೆಗೊಳಿಸುವುದಿಲ್ಲ ಅಥವಾ ನಿಮಗೆ ಸುಳ್ಳು ಹೇಳುವುದಿಲ್ಲ.
7. ಸ್ಕೌಟ್ / ಗೈಡ್ – ನಿಮ್ಮ ಬಾಲಕ / ಬಾಲಕಿಗೆ ಸ್ವಾವಲಂಬನೆಯನ್ನು ಕಲಿಸುತ್ತದೆ. ಇದರಿಂದ ಅವರು ತಮಗೆ ತಾವೇ ರಕ್ಷಣೆ ಪಡೆದು ಇತರರಿಗೂ ನೆರವಾಗಬಲ್ಲರು.
8. ಸ್ಕೌಟ್ / ಗೈಡ್ – ನಿಮ್ಮ ಬಾಲಕ / ಬಾಲಕಿಗೆ ಆರೋಗ್ಯ ತಂದುಕೊಡುತ್ತದೆ. ಬಯಲ ವ್ಯಾಯಾಮ ಮತ್ತು ಆತ್ಮರಕ್ಷಣೆ ಮೂಲಕ ಅವರು ಸದೃಢ ದೇಹ ಮತ್ತು ಸದೃಢ ಮನಸ್ಸನ್ನು ಗಳಿಸುತ್ತಾರೆ.
9. ಸ್ಕೌಟ್ / ಗೈಡ್ – ನಿಮ್ಮ ಬಾಲಕ / ಬಾಲಕಿಯ ಸಹಜ ಪ್ರತಿಭೆಯನ್ನು ಗುರುತಿಸುತ್ತದೆ ಮತ್ತು ಆ ಮೂಲಕ ಅವರು ಉದ್ಯೋಗದ ಆಯ್ಕೆಯಲ್ಲಿ ಸೂಕ್ತವಾದುದನ್ನು ಆರಿಸಿಕೊಳ್ಳಲು ನೆರವಾಗುತ್ತದೆ.
10. ಸ್ಕೌಟ್ / ಗೈಡ್ – ನಿಮ್ಮ ಬಾಲಕ / ಬಾಲಕಿಗೆ ಸಂತೋಷ ನೀಡುತ್ತದೆ. ಹರ್ಷೋಲ್ಲಾಹಗಳ ಸಹವಾಸ ಮತ್ತು ನಿಸರ್ಗದ ಸುಖಾನುಭವದ ಮೂಲಕ ಅವರು ಖುಷಿಯಾಗಿರುತ್ತಾರೆ.
11. ಸ್ಕೌಟ್ / ಗೈಡ್ – ನಿಮ್ಮ ಬಾಲಕ / ಬಾಲಕಿಯ ದೃಷ್ಟಿಕೋನವನ್ನು ವಿಶಾಲಗೊಳಿಸುತ್ತದೆ. ಹೇಗೆಂದರೆ ಪ್ರತಿಯೊಂದು ನಾಗರಿಕ ಸುಸಂಸ್ಕೃತ ದೇಶದಲ್ಲಿ ಇರುವ ಅದರ ಶಾಖೆಗಳು ಪರಸ್ಪರ ಸಂಬಂಧವಿಟ್ಟುಕೊಂಡಿವೆ.
12. ಸ್ಕೌಟ್ / ಗೈಡ್ – ನಿಮ್ಮ ಬಾಲಕ / ಬಾಲಕಿಯನ್ನು ಯೋಗ್ಯ ವ್ಯಕ್ತಿಯನ್ನಾಗಿ ರೂಪಿಸುತ್ತದೆ. ಅವರು ನೀವು ಅಪೇಕ್ಷಿಸಿದಂತಹ ವ್ಯಕ್ತಿಗಳಾಗುತ್ತಾರೆ.



Baden-Powell of Gilwell

**ಬೇಡನ್ ಪೊವೆಲ್**

# ಬೇಡನ್ ಪೊವೆಲ್ ಅಂತಿಮ ಸಂದೇಶ

ಆತ್ಮೀಯ ಸ್ಕೌಟ್ ಗೈಡ್ ಬಂಧುಗಳೇ,



ನೀವು ಯಾವಾಗಲಾದರೂ 'ಪೀಟರ್ ಪ್ಯಾನ್' ನಾಟಕ ನೋಡಿದ್ದರೆ, ಅದರಲ್ಲಿ ಕಡಲುಗಳ್ಳರ ಮುಖ್ಯಸ್ಥ ಯಾವಾಗಲೂ ತನ್ನ ಅಂತಿಮ ದಿನಗಳ ಭಾಷಣವನ್ನು ಹೇಗೆ ಮಾಡುತ್ತಿದ್ದ ಎನ್ನುವುದನ್ನು ಜ್ಞಾಪಿಸಿಕೊಳ್ಳುತ್ತೀರಿ. ಅವನು ಏಕೆ ಹಾಗೆ ಮಾತನಾಡುತ್ತಿದ್ದನೆಂದರೆ, ಒಂದು ವೇಳೆ ತಾನು ಸಾಯುವ ಕಾಲ ಬಂದಾಗ ಅದರಿಂದ ತಪ್ಪಿಸಿಕೊಳ್ಳಲು ತನಗೆ ಸಮಯಾವಕಾಶ ಇರುವುದಿಲ್ಲವೆಂದು ಅವನು ಹೆದರಿದ್ದ. ನನ್ನ ಸ್ಥಿತಿಯೂ ಅದೇ ಆಗಿದೆ. ನಾನು ತಕ್ಷಣದಲ್ಲಿ ಸಾಯುತ್ತಿಲ್ಲವಾದರೂ ಎಂದಾದರೊಂದು ದಿನ ಸಾಯಲೇಬೇಕಲ್ಲ. ಅಂತೇ ನಿಮಗೆ ಕೊನೆಯ ನಮಸ್ಕಾರದ ನುಡಿಗಳನ್ನು ಹೇಳಬೇಕೆಂದಿದ್ದೇನೆ. ನೆನಪಿರಲಿ. ಇದೇ ಕೊನೆ. ಮತ್ತೆಂದೂ ನೀವು ನನ್ನನ್ನು ಕೇಳಲಾರಿರಿ. ಆದ್ದರಿಂದ ವಿಚಾರಮಾಡಿ. ನಾನು ಅತ್ಯಂತ ನೆಮ್ಮದಿಯ ಜೀವನವನ್ನು ನಡೆಸಿದೆ. ಹಾಗೆಯೇ ನಿಮ್ಮಲ್ಲಿ ಪ್ರತಿಯೊಬ್ಬರೂ ನನ್ನಂತೆ ನೆಮ್ಮದಿಯ ಜೀವನವನ್ನು ಅನುಭವಿಸುವಂತಾಗಬೇಕೆಂದು ನಾನು ಇಚ್ಛಿಸುತ್ತೇನೆ. ನಾವು ಸುಖವಾಗಿದ್ದುಕೊಂಡು ಬದುಕನ್ನು ಪೂರ್ಣವಾಗಿ ಅನುಭವಿಸಬೇಕೆಂದೇ ಭಗವಂತನು ನಮ್ಮನ್ನು ಈ ಮನೋಹರ ವಿಶ್ವದಲ್ಲಿ ಇಟ್ಟಿದ್ದಾನೆಂದು ನಾನು ನಂಬಿದ್ದೇನೆ. ನಾವು ಶ್ರೀಮಂತರಾಗಿರುವುದರಿಂದಾಗಲೀ, ನಮ್ಮ ಉದ್ಯೋಗದಲ್ಲಿ ಯಶಸ್ವಿಯಾಗಿರುವುದರಿಂದಾಗಲೀ ಅಥವಾ ಸ್ವಯಂಪಾಪಕ್ಷಮೆ ಯಿಂದಾಗಲೀ ಸುಖ ಉಂಟಾಗುವುದಿಲ್ಲ. ಸುಖ-ಸಂತೋಷಗಳತ್ತ ಇಡುವ ಒಂದು ಹೆಜ್ಜೆಯೆಂದರೆ, ನೀವು ಹುಡುಗರಾಗಿದ್ದಾಗ ನಿಮಗೆ ನೀವೇ ಆರೋಗ್ಯವಾಗಿರುವುದು ಮತ್ತು ಸಶಕ್ತರಾಗಿರುವುದು. ಆಗ ಮಾತ್ರ ನೀವು ಲೋಕಕ್ಕೆ ಬೇಕಾದವರಾಗಿರಬಹುದು ಮತ್ತು ದೊಡ್ಡವರಾದಾಗ ಬದುಕನ್ನು ಚೆನ್ನಾಗಿ ಅನುಭವಿಸಬಹುದು.

ನೀವು ಅನುಭವಿಸಲಿಕ್ಕಾಗಿಯೇ ಭಗವಂತ ಈ ವಿಶ್ವವನ್ನು ಎಷ್ಟು ಸುಂದರ ಮತ್ತು ಸೋಜಿಗದ ವಸ್ತುಗಳಿಂದ ತುಂಬಿದ್ದಾನೆ! ಇದು ನಿಸರ್ಗದ ಅಧ್ಯಯನದಿಂದ ನಿಮಗೆ ತಿಳಿಯುತ್ತದೆ. ನಿಮಗೆ ಇರುವಷ್ಟರಲ್ಲೇ ತೃಪ್ತಿಪಟ್ಟುಕೊಂಡು, ಅದರಿಂದಲೇ ಹೆಚ್ಚಿನ ಪ್ರಯೋಜನ ಪಡೆಯಿರಿ. ಕತ್ತಲೆ ಕವಿದ ಭಾಗವನ್ನು ನೋಡದೆ ಬೆಳಕಿರುವ ಭಾಗವನ್ನು ನೋಡಿ. ಏನಿದ್ದರೂ ಸುಖವನ್ನು ಪಡೆಯುವ ನಿಜವಾದ ಮಾರ್ಗವೆಂದರೆ ಇತರರಿಗೆ ಸುಖವನ್ನು ಕೊಡುವುದು. ಈ ಜಗತ್ತನ್ನು ನೀವು ಕಂಡುದಕ್ಕಿಂತ ಸ್ವಲ್ಪ ಉತ್ತಮವೆನಿಸುವಂತೆ ಮಾಡಿ. ಸಾಯುವ ಸಮಯ ಬಂದಾಗ, ಯಾವುದೇ ಕಾರಣಕ್ಕೆ ನಿಮ್ಮ ಸಮಯವನ್ನು ವ್ಯರ್ಥಗೊಳಿಸದೆ ಸಾಧ್ಯವಾದಷ್ಟೂ ಸಾರ್ಥಕ ಕೆಲಸ ಮಾಡಿದ್ದೇನೆಂಬ ತೃಪ್ತ ಭಾವನೆಯಿಂದ ನೀವು ಸುಖವಾಗಿ ಸಾಯಬಹುದು.

ಹೀಗೆ ಸುಖವಾಗಿ ಬದುಕಲು ಮತ್ತು ಸುಖವಾಗಿ ಸಾಯಲು ನೀವು 'ಸಿದ್ಧರಾಗಿ'. ನೀವು ಬಾಲ್ಯದ ಹಂತವನ್ನು ದಾಟಿ ದೊಡ್ಡವರಾದರೂ ನಿಮ್ಮ ಸ್ಕೌಟ್ಸ್ / ಗೈಡ್ಸ್ ಪ್ರತಿಜ್ಞೆಗೆ ಬದ್ಧರಾಗಿರಿ. ದೇವರು ನಿಮಗೆ ನೆರವಾಗುತ್ತಾನೆ.

ನಿಮ್ಮ ಸ್ನೇಹಿತ

Baden-Powell of Gilwell

ಬೇಡನ್ ಪೊವೆಲ್

# ಚಳವಳಿಯ ಬಗ್ಗೆ ವಿಶ್ವನಾಯಕರ ಚಿಂತನೆ



ಭಾರತ್ ಸ್ಕೌಟ್ಸ್ & ಗೈಡ್ಸ್ ಹಲವಾರು ದಶಕಗಳಿಂದಲೂ ಅಮೂಲ್ಯವಾದ ಕೆಲಸ ಮಾಡುತ್ತಿದೆ. ನಮ್ಮ ದೇಶದ ವಿವಿಧ ಭಾಗಗಳಿಂದ ಒಂದುಗೂಡಿ ಸೇರಿದಾಗ, ವಿದೇಶಗಳಿಂದ ಬಂದು ಭಾಗವಹಿಸಿದವರೊಡನೆ ಕಲೆತಾಗ, ಪರಸ್ಪರ ಸೌಹಾರ್ದತೆ ಮತ್ತು ವಿಶ್ವಮೈತ್ರಿ ಭಾವನೆಗಳು -ಸ್ಫುಟಿದು "ವಿಶ್ವಕುಟುಂಬ"ದ ಪ್ರಾಮುಖ್ಯತೆಗೆ ಒತ್ತು ನೀಡುತ್ತದೆ.

– ಡಾ|| ಎಸ್. ರಾಧಾಕೃಷ್ಣನ್



ನನ್ನ ದೃಷ್ಟಿಯಲ್ಲಿ ಸ್ಕೌಟ್ ಮತ್ತು ಗೈಡ್‌ಗಳು ಅತ್ಯುತ್ತಮ ಆಸ್ತಿ. ಅವರು ಹೆಚ್ಚು ವಿಕಾಸಗೊಂಡಷ್ಟೂ ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ.

– ಜವಾಹರಲಾಲ್ ನೆಹರು



ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸಮಾಜಕ್ಕೆ ಆದರ್ಶ ಹಾಗೂ ಅನುಕರಣೀಯ ವ್ಯಕ್ತಿಗಳು.

– ಡಾ|| ಎ.ಪಿ.ಜೆ. ಅಬ್ದುಲ್ ಕಲಾಂ



ನನಗೇನಾದರೂ ಒಂದು ಡಜನ್ ಮಕ್ಕಳಿದ್ದಿದ್ದರೆ ಅವರಲ್ಲಿ ಪ್ರತಿಯೊಬ್ಬನನ್ನೂ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಕಳುಹಿಸುತ್ತಿದ್ದೆ.

– ಡಾ|| ಅನಿಬೆಸೆಂಟ್



ಸ್ವಾತಂತ್ರ್ಯಾನಂತರದಲ್ಲಿ ಸ್ಕೌಟ್ ಚಳವಳಿಯು ನಮ್ಮ ದೇಶದಲ್ಲಿ ಜನಾನುರಾಗಿಯಾಗಿ ಬೆಳೆಯುತ್ತಾ ಬಂದಿದೆ. ಬಾಲಕ, ಬಾಲಕಿಯರಿಗೆ ಸಚ್ಚಾರಿತ್ರ್ಯ ನಿರ್ಮಾಣದಲ್ಲಿ ಶಿಕ್ಷಣ ನೀಡುತ್ತದೆ. ಸದೃಢರಾಗಿ, ಶಿಸ್ತುಗಾರರಾಗಿ, ಸಮಾಜೋಪಯೋಗಿ ವ್ಯಕ್ತಿಗಳಾಗಿ ಬಾಳುವಂತೆ ತರಬೇತಿ ನೀಡುವ ಚಳವಳಿಯಾಗಿದೆ. ಸ್ಕೌಟ್ಸ್/ಗೈಡ್ಸ್‌ಗಳು ನಿಯಮವನ್ನು ನೆನಪಿನಲ್ಲಿಟ್ಟುಕೊಂಡು, ತಮ್ಮ ಕರ್ತವ್ಯ ಪಾಲನೆಯಲ್ಲಿ ನಿರತರಾಗಲೆಂದು ಹಾಗೂ ರಾಷ್ಟ್ರದ ಶಾಂತಿದೂತರಾಗಿ ಬಾಳಲೆಂದು ಆಶಿಸುತ್ತೇನೆ.

– ಶ್ರೀ ಜಯಚಾಮರಾಜೇಂದ್ರ ಒಡೆಯರ್



20ನೆಯ ಶತಮಾನದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಅತ್ಯಂತ ಮಹತ್ವದ ಕೊಡುಗೆ ಬಂದಿರುವುದು ಶಿಕ್ಷಣತಜ್ಞರಿಂದಲ್ಲ; ಸ್ಕೌಟ್ ಚಳವಳಿಯನ್ನು ಸ್ಥಾಪಿಸಿದ ಸಿಪಾಯಿಯಿಂದ.

– ಜಾರ್ಜ್ ಬರ್ನಾಡ್ ಷಾ



ಸ್ಕೌಟ್ಸ್, ಗೈಡ್ಸ್ ಇದು ಮೂಲತಃ ಚಾರಿತ್ರ್ಯ ಬೆಳೆಸುವ ಒಂದು ಚಳವಳಿಯಾಗಿದ್ದು, ನಮ್ಮ ರಾಷ್ಟ್ರದ ಅಷ್ಟೇ ಏಕೆ – ಇಡೀ ಪ್ರಪಂಚದ ಪ್ರಜಾಪ್ರಭುತ್ವ ಸಮಾಜದ ಭಾರವನ್ನು ಹೊರಲು ಹಾಗೂ ನಾವು ಯೋಗ್ಯ ನಾಗರೀಕರಾಗಲು ತರಬೇತಿ ನೀಡುತ್ತದೆ.

– ಎಸ್. ನಿಜಲಿಂಗಪ್ಪ

ಪ್ರಕಾಶಕರು

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

# 39, 'ಶಾಂತಿಗೃಹ', ಅರಮನೆ ರಸ್ತೆ, ಬೆಂಗಳೂರು 560001, ದೂ: 080-22260017/22267470

e-mail: shq@bsgkarnataka.org; shanthigruha@scout.org.in

web: www.bsgkarnataka.org